Table of Contents

ಕರ್ನಾಟಕ ಸರ್ಕಾರ

## ಸಮಾಜ ವಿಜ್ಞಾನ ಭಾಗ- 2

ಒಂಬತ್ತನೆಯ ತರಗತಿ

ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)

100 ಅಡಿ ವರ್ತುಲ ರಸ್ತೆ, ಬನಶಂಕರಿ 3 ನೇ ಹಂತ,

ಬೆಂಗಳೂರು- 85

**ಮಿತ್ರ ಜ್ಯೋತಿ ಡಿಜಿಟಲ್ ಲೈಬ್ರರಿ**

**ಮಿತ್ರ ಜ್ಯೋತಿ**

ಸಿ. ಎ. ಸೈಟ್ ನಂ. ಪಿ- 22, 18 ನೇ ಅಡ್ಡರಸ್ತೆ, 31 ನೇ ಮುಖ್ಯರಸ್ತೆ,

ಸೆಕ್ಟರ್- 1, ನಿಫ್ಟ್‌ನ ಹಿಂಭಾಗ, ಹೆಚ್. ಎಸ್. ಆರ್. ಲೇಔಟ್,

ಬೆಂಗಳೂರು- 560102

+91 ಕಂಟ್ರಿ ಕೋಡ್: 80 ಸಿಟಿ ಕೋಡ್

ದೂರವಾಣಿ ಸಂಖ್ಯೆ: 22587623/ 22587625

ಈ-ಮೇಲ್: mj.tblibrary@gmail.com

ವೆಬ್ ಸೈಟ್: www.mitrajyothi.org

**ಪ್ರತಿಕರಣ ಹಕ್ಕು ತಿದ್ದುಪಡಿ ಪ್ರಕಟಣೆ:**

ಸುಲಭವಾಗಿ ಲಭ್ಯವಾಗುವ ಈ ಪುಸ್ತಕ/ ಡೈಸಿ ಧ್ವನಿಮುದ್ರಣವನ್ನು, ಸಾಮಾನ್ಯ ಮುದ್ರಣ ಪ್ರತಿಯನ್ನು ಓದಲಾಗದ ದೃಷ್ಟಿವಿಶೇಷಚೇತನರಿಗಾಗಿ ಹಾಗೂ ಮುದ್ರಣ ಪ್ರತಿಯನ್ನು ಓದಲು ಅಸಮರ್ಥರಾದವರಿಗಾಗಿ ಮಿತ್ರಜ್ಯೋತಿ ಸಂಸ್ಥೆಯಿಂದ ವಿಶೇಷವಾಗಿ ತಯಾರಿಸಲಾಗಿದೆ. ಮಿತ್ರಜ್ಯೋತಿಯ ವಿಳಾಸ: ಸಿ.ಎ. ಸೈಟ್ ನಂ. ಪಿ 22, 18 ನೇ ಅಡ್ಡರಸ್ತೆ, 31 ನೇ ಮುಖ್ಯರಸ್ತೆ, ಸೆಕ್ಟರ್ 1, ನಿಫ್ಟ್‌ನ ಹಿಂಭಾಗ, ಹೆಚ್.ಎಸ್.ಆರ್. ಲೇಔಟ್, ಬೆಂಗಳೂರು – 560 102. ದೂರವಾಣಿ ಸಂಖ್ಯೆ – 22587623/ 22587625 (ಭಾರತದ ಕೋಡ್: +91, ಬೆಂಗಳೂರಿನ ಕೋಡ್: 080). ಈ-ಮೇಲ್ ವಿಳಾಸ: mj.tblibrary@gmail.com; ವೆಬ್ಸೈಟ್: www.mitrajyothi.org

ಈ ಪುಸ್ತಕ/ ಡೈಸಿ ಧ್ವನಿಮುದ್ರಣವನ್ನು ಜುಲೈ 24, 2014 ರಲ್ಲಿ ಭಾರತದಲ್ಲಿ ಊರ್ಜಿತಗೊಂಡ ಮಾರಾಕೇಶ್ ಕರಾರಿನಂತೆ ಹಾಗೂ 1957 ರ ಪ್ರತಿಕರಣ ಹಕ್ಕು ಕಾಯ್ದೆ ಪ್ರಕರಣ 52 (1)(zb) ಪ್ರಕಾರ ಮುದ್ರಣ ಪ್ರತಿಯನ್ನು ಓದಲು ಅಸಮರ್ಥರಾದವರಿಗಾಗಿ ಮಾತ್ರ ವಿತರಿಸಲು ತಯಾರಿಸಲಾಗಿದೆ. ಮೂಲ ಪ್ರಕಟಣೆಯಿಂದ ಸುಲಭವಾಗಿ ಲಭ್ಯವಾಗುವ ಶೈಲಿಗೆ ಪರಿವರ್ತಿಸಲ್ಪಟ್ಟ ಈ ಪುಸ್ತಕ/ ಡೈಸಿ ಧ್ವನಿಮುದ್ರಣವನ್ನು ಬಳಸಲು ಮುದ್ರಣ ಪ್ರತಿಯನ್ನು ಓದಲು ಅಸಮರ್ಥರಾದವರಿಗೆ ಮಾತ್ರ ಅನುಮತಿಯಿದೆ. ಇದರ ಹೆಚ್ಚಿನ ಪ್ರತಿಗಳ ತಯಾರಿಕೆ ಅಥವಾ ಸಾಮಾನ್ಯ ಮುದ್ರಣ ಪ್ರತಿಯನ್ನು ಓದಲು ಸಮರ್ಥರಾದ ಯಾರಿಗೇ ಆಗಲಿ ಇದನ್ನು ವಿತರಿಸುವುದು ಅಥವಾ ಬೇರೆ ಯಾವುದೇ ರೀತಿಯ ವಾಣಿಜ್ಯ- ವ್ಯಾಪಾರಕ್ಕೆ ಈ ಪುಸ್ತಕ/ ಡೈಸಿ ಧ್ವನಿಮುದ್ರಣದ ಬಳಸುವಿಕೆಯನ್ನು ಕಟ್ಟುನಿಟ್ಟಾಗಿ ನಿಷೇಧಿಸಲಾಗಿದೆ. ಹಾಗೆ ಬಳಸುವವರ ವಿರುದ್ಧ ಕಾನೂನಾತ್ಮಕವಾಗಿ ಕಠಿಣ ಕ್ರಮಗಳನ್ನು ಕೈಗೊಳ್ಳಲಾಗುವುದು.

## ಪರಿವಿಡಿ

### ಸಮಾಜಶಾಸ್ತ್ರ

| ಕ್ರಮ ಸಂಖ್ಯೆ | ಶೀರ್ಷಿಕೆ |
|---|---|
| 1 | ಕುಟುಂಬ |
| 2 | ಸಾಮಾಜೀಕರಣ |
| 3 | ಸಾಮಾಜಿಕ ಬದಲಾವಣೆ |
| 4 | ಸಮುದಾಯ |

### ಭೂಗೋಳ ವಿಜ್ಞಾನ

| | |
|---|---|
| 1 | ನಮ್ಮ ರಾಜ್ಯ- ಕರ್ನಾಟಕ |
| 2 | ಪ್ರಾಕೃತಿಕ ವಿಭಾಗಗಳು |
| 3 | ಕರ್ನಾಟಕದ ವಾಯುಗುಣ, ಮಣ್ಣುಗಳು, ಸ್ವಾಭಾವಿಕ ಸಸ್ಯವರ್ಗ ಹಾಗೂ ಪ್ರಾಣಿ ಸಂಪತ್ತು |
| 4 | ಕರ್ನಾಟಕದ ಜಲಸಂಪನ್ಮೂಲಗಳು |
| 5 | ಕರ್ನಾಟಕದ ಭೂ ಸಂಪತ್ತು |
| 6 | ಖನಿಜ ಸಂಪನ್ಮೂಲಗಳು 56 |
| 7 | ಸಾರಿಗೆ |
| 8 | ಕರ್ನಾಟಕದ ಕೈಗಾರಿಕೆಗಳು |
| 9 | ಕರ್ನಾಟಕದ ಪ್ರಮುಖ ಪ್ರವಾಸಿ ಕೇಂದ್ರಗಳು |
| 10 | ಕರ್ನಾಟಕದ ಜನಸಂಖ್ಯೆ76 |

**ಅರ್ಥಶಾಸ್ತ್ರ**

| | |
|---|---|
| 1 | ನೈಸರ್ಗಿಕ ಸಂಪನ್ಮೂಲಗಳು |
| 2 | ಭಾರತದ ಮಾನವ ಸಂಪನ್ಮೂಲಗಳು |
| 3 | ಬಡತನ ಮತ್ತು ಹಸಿವು |
| 4 | ಶ್ರಮ ಹಾಗೂ ಉದ್ಯೋಗ |

**ವ್ಯವಹಾರ ಅಧ್ಯಯನ**

| | |
|---|---|
| 1 | ವ್ಯವಹಾರ ನಿರ್ವಹಣೆ |
| 2 | ಹಣಕಾಸಿನ ನಿರ್ವಹಣೆ |
| 3 | ವ್ಯವಹಾರದಲ್ಲಿ ಲೆಕ್ಕ ಬರಹ 126 |
| | |

# ಸಮಾಜಶಾಸ್ತ್ರ ಅಧ್ಯಾಯ-1 ಕುಟುಂಬ

**ಈ ಅಧ್ಯಾಯದಲ್ಲಿ ಕೆಳಗಿನ ಅಂಶಗಳನ್ನು ತಿಳಿಯುತ್ತೇವೆ.**

1. ಕುಟುಂಬದ ಅರ್ಥ.
2. ಕುಟುಂಬದ ಲಕ್ಷಣಗಳು
3. ಕುಟುಂಬದ ಪ್ರಕಾರಗಳು
4. ಅವಿಭಕ್ತ ಕುಟುಂಬದ ಲಕ್ಷಣಗಳು

## ಕುಟುಂಬ

ಮಾನವ ಸಮಾಜ ಮೂಲಭೂತ ಬಯಕೆಗಳನ್ನು ಈಡೇರಿಸಿಕೊಳ್ಳುವ ಉದ್ದೇಶದಿಂದಾಗಿ ಹಲವು ಸಾಮಾಜಿಕ ಸಂಸ್ಥೆಗಳನ್ನು ತನ್ನ ಹಲವು ರೂಪಿಸಿಕೊಂಡಿದೆ. ಇಂತಹ ಸಂಸ್ಥೆಗಳಲ್ಲಿ ಕುಟುಂಬ ಅತ್ಯಂತ ಪ್ರಮುಖವಾದದ್ದು. ಕುಟುಂಬವು ಅತ್ಯಂತ ಸಣ್ಣ ಸಾಮಾಜಿಕ ಸಂಸ್ಥೆಯಾದರೂ ಅದು ಸಮಾಜದ ಮೂಲಸಂಸ್ಥೆ. ಸಮಾಜದ ಎಲ್ಲಾ ಚಟುವಟಿಕೆಗಳು ನಡೆಯುವುದು ಕುಟುಂಬದ ಆಧಾರದಲ್ಲಿ, ಅಂದರೆ ಕುಟುಂಬದ ಸದಸ್ಯರೆ, ಸಾಮಾಜಿಕ ಸಂಸ್ಥೆಗಳ ಸದಸ್ಯರೂ ಆಗಿರುತ್ತಾರೆ. ಕುಟುಂಬದ ಲಕ್ಷಣಗಳನ್ನು ಅರ್ಥಮಾಡಿಕೊಳ್ಳುವ ಮೂಲಕ ಅದನ್ನು ವಿವರವಾಗಿ ನಾವು ತಿಳಿಯಬಹುದು.

ಕುಟುಂಬವನ್ನು ಇಂಗ್ಲೀಷಿನಲ್ಲಿ ‘ಫ್ಯಾಮಿಲಿ’ ಎಂದು ಕರೆಯುತ್ತಾರೆ. ‘ಫ್ಯಾಮಿಲಿ’ ಎಂಬ ಶಬ್ದವು ‘ಫ್ಯಾಮುಲಸ್’ (Famulus) ಎಂಬ ಲಾಟಿನ್ ಶಬ್ದದಿಂದ ಬಂದಿದೆ. ಫ್ಯಾಮೂಲಸ್ ಎಂದರೆ ಆಳು ಎಂದು ಅರ್ಥ. ಹಿಂದಿನ ಕಾಲದ ಕುಟುಂಬಗಳಲ್ಲಿ ಗಂಡ-ಹೆಂಡತಿ ಮತ್ತು ಮಕ್ಕಳುಗಳಲ್ಲದೆ ಇತರೆ ಸದಸ್ಯರು ಇದ್ದರೆಂದು ತಿಳಿಯುತ್ತದೆ. ಇಂದು ಇತರೆ ಮಕ್ಕಳು ಇಲ್ಲದ, ತಂದೆ ತಾಯಿಗಳು ಮಾತ್ರ ಇರುವ ಮತ್ತು ದತ್ತುಮಕ್ಕಳನ್ನು ಹೊಂದಿರುವ ಕುಟುಂಬಗಳು ಇದೆ.

ಕುಟುಂಬದ ಸದಸ್ಯರ ಒಳಗಿನ ಸಂಬಂಧವು ಒಂದೇ ರಕ್ತಸಂಬಂಧದ ಮೇಲೆ ನಿರ್ಧಾರವಾಗುತ್ತದೆ. ಇಲ್ಲಿ ವಿವಾಹ, ರಕ್ತಸಂಬಂಧ ಹಾಗೂ ದತ್ತು ಸ್ವೀಕಾರವನ್ನು ಒಳಗೊಂಡಿರುತ್ತದೆ. ಇದು ಗಂಡ-ಹೆಂಡತಿ, ತಂದೆ-ತಾಯಿ, ಮಗ- ಮಗಳು, ಸಹೋದರ-ಸಹೋದರಿ ಸಂಬಂಧವನ್ನು ಹೊಂದಿ, ತಮ್ಮ ಸ್ಥಾನಕ್ಕೆ ಪೂರಕವಾಗಿ ಪಾತ್ರಗಳನ್ನು ನಿರ್ವಹಿಸಿ, ಸಾಮಾನ್ಯ ಸಂಸ್ಕೃತಿಯನ್ನು ರೂಪಿಸಿಕೊಳ್ಳುವಲ್ಲಿ ನಿರತರಾಗಿರುತ್ತಾರೆ. ಕುಟುಂಬ ಎಂದರೆ “ಸಾಮಾನ್ಯವಾಗಿ ಬಹುಕಾಲ ಸಂತತಿ ಸಹಿತ-ಸಂತತಿ ರಹಿತ, ಗಂಡ-ಹೆಂಡತಿಯ ಸಂಘಜೀವನ ಎಂದು ಹೇಳಬಹುದು”. ಇದರ ಮುಖ್ಯ ಆಧಾರ ಎಂದರೆ ರಕ್ತಸಂಬಂಧ ಮತ್ತು ಭಾವನೆಗಳು. ಕುಟುಂಬವು ಕೇವಲ ಸಂತಾನೋತ್ಪತ್ತಿ ಮತ್ತು ಮಕ್ಕಳ ಪಾಲನೆ- ಪೋಷಣೆಗಳನ್ನು ಮಾತ್ರ

ಮಾಡದೆ, ಸಾಮಾಜೀಕರಣ ಪ್ರಕ್ರಿಯೆಯ ಮೂಲಕ ತನ್ನ ಸದಸ್ಯರನ್ನು ವಿಸ್ತೃತ ಸಮಾಜದ ಸದಸ್ಯರನ್ನಾಗಿ ಮಾಡುವ ಪ್ರಕ್ರಿಯೆಯಲ್ಲಿ ತೊಡಗಿಕೊಂಡಿರುತ್ತದೆ. ಅಂದರೆ ಸಾಮಾಜಿಕ ನಡವಳಿಕೆ, ಉಡುಗೆ-ತೊಡುಗೆ, ಆಚಾರ-ವಿಚಾರ ಇತ್ಯಾದಿ ವಿಷಯಗಳನ್ನು ಅಧಿಕಾರಯುತವಾಗಿ ಕುಟುಂಬವು ನಿರ್ವಹಿಸುತ್ತದೆ.

## ಕುಟುಂಬದ ಲಕ್ಷಣಗಳು

ಕುಟುಂಬದ ಲಕ್ಷಣಗಳನ್ನು ಅರ್ಥಮಾಡಿಕೊಳ್ಳುವ ಮೂಲಕ ಕುಟುಂಬದ ಮಹತ್ವವನ್ನು ನಾವು ತಿಳಿಯಬಹುದು.

1. **ಕುಟುಂಬ ಸರ್ವವ್ಯಾಪಕವಾದದ್ದು:** ಪ್ರಪಂಚದ ಎಲ್ಲಾ ಸಮಾಜಗಳಲ್ಲಿಯೂ ಆಯಾ ಕಾಲ-ಆಯಾ ಪ್ರದೇಶಕ್ಕೆ ತಕ್ಕಂತೆ ಸ್ವಲ್ಪಮಟ್ಟಿನ ವ್ಯತ್ಯಾಸವಿದ್ದರೂ ನಾವು ಎಲ್ಲ ಸಮಾಜಗಳಲ್ಲಿ ಕುಟುಂಬವನ್ನು ಕಾಣಬಹುದು. ವಿವಾಹ, ಪಾಲನೆ, ಪೋಷಣೆ, ಬಂಧುತ್ವ, ಆಸ್ತಿ, ವಿಷಯಗಳಲ್ಲಿ ಒಂದು ಗೊತ್ತುಪಡಿಸಿಕೊಂಡ ನಿಯಮವನ್ನು ಕುಟುಂಬಗಳು ಅನುಸರಿಸಲ್ಪಟ್ಟಿರುತ್ತವೆ. ಸಾಧಾರಣವಾಗಿ ಆಯಾ ಕುಟುಂಬಕ್ಕೆ ಸೇರಿದ ಸದಸ್ಯರೆಲ್ಲಾ ಒಂದೇ ಸ್ಥಳದಲ್ಲಿ ಅಥವಾ ಸೂರಿನಲ್ಲಿ ವಾಸಿಸುತ್ತಾರೆ.

2. **ಸಮಾಜದ ಎಲ್ಲಾ ಚಟುವಟಿಕೆಗಳ ಮೂಲಘಟಕ:** ಯಾವುದೇ ಸಮಾಜದ ಸಾಮಾಜಿಕ ಸಂಸ್ಥೆಗಳ ಚಟುವಟಿಕೆಗಳು ಪ್ರಾರಂಭವಾಗುವುದೇ ಕುಟುಂಬದಿಂದ. ಸಮಾಜದ ರಾಜಕೀಯ, ಆರ್ಥಿಕ, ಶೈಕ್ಷಣಿಕ, ಇನ್ನೂ ಮೊದಲಾದ ಚಟುವಟಿಕೆಗಳು ಮೊಳಕೆಯಾಗುವುದು ಕುಟುಂಬದಿಂದ. ಈ ಹಿಂದೆ ಸಾಮುದಾಯಿಕ ಪ್ರಮುಖ ಕೆಲಸಗಳಿಗೆ (ಊರೊಟ್ಟಿನ) ಕುಟುಂಬವು ತನ್ನ ಸದಸ್ಯರನ್ನು ಕಳುಹಿಸುತ್ತಿತ್ತು. ಇಂದಿನ ಸಂಕೀರ್ಣ ಸಮಾಜದಲ್ಲಿ ತನ್ನ ಕೆಲವು ಕಾರ್ಯಗಳನ್ನು ಸಮಾಜದ ಇತರೆ ಸಂಸ್ಥೆಗಳಿಗೆ ಬಿಟ್ಟುಕೊಟ್ಟಿದೆ.

3. **ಜವಾಬ್ದಾರಿ ಮತ್ತು ಸಾಮಾಜಿಕ ಹೊಣೆಗಾರಿಕೆ:** ಸಮಾಜದ ಇತರ ಸಂಸ್ಥೆಗಳ ಜೊತೆ ವಿವಿಧ ಸಂದರ್ಭಗಳಲ್ಲಿ ಯಾವ ರೀತಿ ನಡೆದುಕೊಳ್ಳಬೇಕು ಮತ್ತು ಯಾವ ಜವಾಬ್ದಾರಿಯನ್ನು ನಿರ್ವಹಿಸಬೇಕು ಎಂದು ಕುಟುಂಬ ತನ್ನ ಸದಸ್ಯರಿಗೆ ಹೇಳಿ ಕೊಡುತ್ತದೆ. ಮಕ್ಕಳಿಗೆ, ನೆರೆಹೊರೆಯವರೊಂದಿಗೆ ಹೊಂದಿಕೊಂಡು ಹೇಗೆ ಜೀವಿಸಬೇಕು ಎಂದು ಹೇಳಿಕೊಡುತ್ತದೆ. ಅಷ್ಟು ಮಾತ್ರವಲ್ಲ, ಕೆಲವು ಸಾಮಾಜಿಕ ಜವಾಬ್ದಾರಿಗಳನ್ನು ಹೇಳಿ ಕೊಡುತ್ತದೆ. ಉದಾಹರಣೆಗೆ: ಸಾರ್ವಜನಿಕ ಕುಡಿಯುವ ನೀರಿನ ವ್ಯವಸ್ಥೆ ಕಲುಷಿತಗೊಳ್ಳದಂತೆ ಎಚ್ಚರ ವಹಿಸಬೇಕಾದ ಪ್ರಾಥಮಿಕ ಜವಾಬ್ದಾರಿಗಳನ್ನು ತಿಳಿಸುತ್ತದೆ.

4. **ಪಾಲನೆ ಮತ್ತು ಪೋಷಣೆ:** ಕುಟುಂಬವು ಪ್ರಾಥಮಿಕ ಹಂತದಲ್ಲಿ ಮಕ್ಕಳ ಸಂಬಂಧಿಸಿದ ಹಕ್ಕು-ಬಾಧ್ಯತೆಗಳನ್ನು ಸೃಷ್ಟಿ ಮಾಡುತ್ತದೆ. ಅಲ್ಲದೇ ಅವುಗಳ ರಕ್ಷಣೆಗೆ

ಕ್ರಮವಹಿಸುತ್ತದೆ. ಮಗುವಿನ ಲಾಲನೆ-ಪಾಲನೆ ಮತ್ತು ಅಕ್ಷರ ಕಡೆಗಿನ ದಾರಿಯನ್ನು ಸೃಷ್ಟಿಸುತ್ತದೆ. ವೃದ್ಧಾಪ್ಯದಲ್ಲಿ ಕುಟುಂಬದ ಹಿರಿಯರ (ಅಜ್ಜ-ಅಜ್ಜಿ, ತಂದೆ-ತಾಯಿ) ಆರೈಕೆ-ಪೋಷಣೆ-ಶುಶ್ರೂಷೆ ಮತ್ತು ಅವರ ರಕ್ಷಣೆಯನ್ನು ಮಾಡುವುದು ಆಯಾ ಕುಟುಂಬದ ಕರ್ತವ್ಯವಾಗಿದೆ.

5. **ಸಾಮಾಜಿಕ ವರ್ತನೆಗಳನ್ನು ಹೇಳಿ ಕೊಡುತ್ತದೆ:** ಸಾಮಾಜಿಕ ಬೆಳವಣಿಗೆಯ ಹಂತಗಳಲ್ಲಿ ಬಾಲ್ಯ- ಯೌವ್ವನ ಮುಖ್ಯ. ಮಗುವು ಕುಟುಂಬದೊಳಗೆ ಮಾತನಾಡುವ ಮಾತೃಭಾಷೆಯನ್ನು ಮೊದಲು ತಿಳಿಯುತ್ತದೆ. ಅದರ ಸಹಾಯದಿಂದ ಸಾಮಾಜಿಕ ವಿಚಾರಗಳನ್ನು ತಿಳಿದುಕೊಳ್ಳುತ್ತದೆ. ಕುಟುಂಬದ ಸುತ್ತಮುತ್ತಲಿನ ಸಾಮಾಜಿಕ ಪರಿಸರದಲ್ಲಿ ಬೆಳೆಯುವ ಮಕ್ಕಳು ಅದಕ್ಕನುಗುಣವಾದ ಗುಣಲಕ್ಷಣಗಳನ್ನು ಬೆಳೆಸಿಕೊಳ್ಳುತ್ತಾರೆ. ಸಮ ವಯಸ್ಸಿನ ಮಕ್ಕಳೊಂದಿಗೆ, ಹಿರಿಯರೊಂದಿಗೆ, ಗುಂಪುಗಳೊಂದಿಗೆ ವಿವಿಧ ಸಂದರ್ಭಗಳಲ್ಲಿ ಹೇಗೆ ಬೆರೆಯಬೇಕು ಎಂಬುದನ್ನು ಕುಟುಂಬ ಹೇಳಿಕೊಡುತ್ತಿರುತ್ತದೆ. ಅಂದರೆ ಸಾಮಾಜಿಕ ವರ್ತನೆಗಳು- ಬೇಡಿಕೆಗಳು- ನಿಯಂತ್ರಣಗಳು ಮಗುವಿನ ಮೇಲೆ ಪರೋಕ್ಷವಾದ ಪ್ರಭಾವವನ್ನು ಬೀರುತ್ತಿರುತ್ತವೆ. ಬಾಲ್ಯ-ಯೌವ್ವನ, ಮಧ್ಯವಯಸ್ಸು ಮತ್ತು ಮುಪ್ಪಿನಲ್ಲಿ ಸ್ನೇಹ, ಸ್ವಾತಂತ್ರ್ಯ, ಭದ್ರತೆ ಹಾಗೂ ಇತರೆ ವರ್ತನೆಗಳನ್ನು ಕುಟುಂಬ ಹೇಳಿಕೊಡುತ್ತದೆ.

ತಲೆಮಾರುಗಳ ಪರಂಪರೆಯನ್ನು ತಿಳಿಸುತ್ತದೆ: ಕುಟುಂಬ ಹಲವಾರು ತಲೆಮಾರುಗಳ ಪರಂಪರೆಯ ಮೇಲೆ ನಿಂತಿದೆ. ತಲೆಮಾರುಗಳು ರಕ್ತಸಂಬಂಧಿಗಳನ್ನು ಪರಿಚಯಿಸುತ್ತದೆ. ಅಜ್ಜ-ಅಜ್ಜಿ, ಅಪ್ಪ-ಅಮ್ಮ, ಮಕ್ಕಳ ಸಂಬಂಧಗಳನ್ನು ವಿವರಿಸುತ್ತದೆ. ಅಜ್ಜ, ಅಜ್ಜಿ ಹಿರಿಯ ಪೋಷಕರು. (Grand Parents) ಒಂದನೇ ತಲೆಮಾರಿಗೆ ಸೇರಿದವರು. ಅಪ್ಪ-ಅಮ್ಮ, ಪೋಷಕರು (Parents) ಎರಡನೇ ತಲೆಮಾರಿಗೆ ಸೇರಿದವರು. ಮಕ್ಕಳು ಮೂರನೇ ತಲೆಮಾರಿಗೆ ಸೇರಿದವರು ಎಂದು ಹೇಳಿಕೊಡುತ್ತದೆ. ಹೀಗೆ ತಲೆಮಾರುಗಳ ಸಂಬಂಧಗಳನ್ನು ಮತ್ತು ಅದರ ಪರಂಪರೆಯನ್ನು ಪ್ರಾಥಮಿಕವಾಗಿ ಹೇಳಿಕೊಡುತ್ತದೆ.

I. ಅಪ್ಪ-ಅಮ್ಮ ಮತ್ತು ಮಕ್ಕಳು ವಾಸಿಸುವ ಕುಟುಂಬವನ್ನು ಎರಡು ತಲೆಮಾರುಗಳ ಕುಟುಂಬ ಎಂದು ಕರೆಯುತ್ತಾರೆ.

II. ಅಜ್ಜ-ಅಜ್ಜಿ, ಅಪ್ಪ-ಅಮ್ಮ, ಮಕ್ಕಳು ಕೂಡಿದ ಸಂಬಂಧವನ್ನು ಮೂರು ತಲೆಮಾರು ಕೂಡಿದ ಕುಟುಂಬ ಎನ್ನುತ್ತಾರೆ.

III. ಅಜ್ಜ-ಅಜ್ಜಿ, ಅಪ್ಪ-ಅಮ್ಮ, ಮಕ್ಕಳು - ಮೊಮ್ಮಕ್ಕಳಿಂದ ಕೂಡಿದ ಕುಟುಂಬವನ್ನು ನಾಲ್ಕು ತಲೆಮಾರಿನ ವಿಸ್ತೃತ ಕುಟುಂಬ ಎನ್ನುತ್ತಾರೆ.

## ಕುಟುಂಬದ ಪ್ರಕಾರಗಳು

ಕುಟುಂಬ ಆಯಾ ಸಮುದಾಯ ಮತ್ತು ಪ್ರದೇಶಗಳ ರೂಢಿ ಪದ್ಧತಿಗಳ ಆಧಾರದಲ್ಲಿ ರಚನೆಗೊಂಡಿದೆ. ಸಮಾಜಶಾಸ್ತ್ರಜ್ಞರು ಮತ್ತು ಮಾನವಶಾಸ್ತ್ರಜ್ಞರು ಕುಟುಂಬದ ರಚನೆಯ ಆಧಾರದಲ್ಲಿ ಕುಟುಂಬದ ಪ್ರಕಾರಗಳನ್ನು ನಿರೂಪಿಸಿದ್ದಾರೆ. ಈಗಾಗಲೇ ತಿಳಿಸಿದಂತೆ ತಲೆಮಾರಿನ ಆಧಾರದಲ್ಲಿ ಕುಟುಂಬವನ್ನು ಗುರುತಿಸಲಾಗಿದೆ. ಗಂಡ-ಹೆಂಡತಿ ಒಟ್ಟಿಗೆ ವಾಸಿಸುತ್ತಿರುವ ಕುಟುಂಬದಲ್ಲಿ ಹುಟ್ಟಿದ ಮಕ್ಕಳಿಗೆ ಅದು ಕೇಂದ್ರ ಕುಟುಂಬವಾಗುತ್ತದೆ. ಹೆಚ್ಚು ತಲೆಮಾರುಗಳ ರಕ್ತಸಂಬಂಧಿಗಳು ವಾಸಿಸುತ್ತಿದ್ದರೆ ಅದನ್ನು ಅವಿಭಕ್ತ ಕುಟುಂಬ ಎಂದು ಕರೆಯುತ್ತೇವೆ.

ವಿವಾಹ ಪದ್ಧತಿ ಆಧಾರದಲ್ಲಿ ಕುಟುಂಬ ಪದ್ಧತಿಗಳನ್ನು ನಿರ್ಣಯಿಸಬಹುದು. ಈ ಆಧಾರದಲ್ಲಿ ಏಕಪತ್ನಿತ್ವ ಕುಟುಂಬ ಮತ್ತು ಬಹುಪತ್ನಿತ್ವ ಕುಟುಂಬ ಮತ್ತು ಬಹುಪತಿತ್ವ ಕುಟುಂಬಗಳೆಂಬ 3 ವಿಧಗಳಿವೆ.

1. ರಕ್ತ ಸಂಬಂಧವನ್ನು ಆಧರಿಸಿದ ಕುಟುಂಬ
2. ಸಂಗಾತಿಗಳ ವಾಸಸ್ಥಾನಗಳನ್ನು ಆಧಾರವಾಗಿಟ್ಟುಕೊಂಡು ಮಾತೃನೆಲೆ ಕುಟುಂಬ ಮತ್ತು ಪಿತೃನೆಲೆ ಕುಟುಂಬ
3. ಅಧಿಕಾರ ಕೇಂದ್ರತೆಯ ಆಧಾರದಲ್ಲಿ ಮಾತೃಪ್ರಧಾನ ಮತ್ತು ಪಿತೃಪ್ರಧಾನ ಕುಟುಂಬ ಹೀಗೆ ವರ್ಗೀಕರಿಸಲಾಗಿದೆ. ಹಾಗೆಯೇ ವಂಶದ ಆಧಾರದಲ್ಲಿ ಮಾತೃವಂಶೀಯ ಮತ್ತು ಪಿತೃವಂಶೀಯ ಕುಟುಂಬ ಎಂಬ ಎರಡು ವಿಧಗಳಿವೆ.

## ಮಾತೃಪ್ರಧಾನ ಕುಟುಂಬ:

ಮಾತೃಪ್ರಧಾನ ಕುಟುಂಬದಲ್ಲಿ ಆಸ್ತಿಯ ಮೇಲಿನ ಹಕ್ಕು ಮತ್ತು ಉತ್ತರಾಧಿಕಾರಗಳು ಮಹಿಳೆಗೆ ಇರುತ್ತವೆ. ಆಸ್ತಿಯು ತಾಯಿಯಿಂದ ಮಗಳಿಗೆ ಹೋಗುತ್ತದೆ. ಸಾಧಾರಣವಾಗಿ ತಾಯಿಯೇ ಇಲ್ಲಿ ಕುಟುಂಬದ ಒಡತಿ, ಆಕೆಯ ಹೆಸರಿನಲ್ಲಿಯೇ ಆಸ್ತಿಯ ವಹಿವಾಟು ನಡೆಯುತ್ತದೆ. ಕರ್ನಾಟಕದ ಕರಾವಳಿ ಪ್ರದೇಶದ ಕೆಲವು ಸಮುದಾಯದಲ್ಲಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಈಗಲೂ ನಾವು ಕಾಣುತ್ತೇವೆ. ಹಾಗೆಯೇ ಕೇರಳ ರಾಜ್ಯದ ಮಲಬಾರಿನ ನಾಯರ್ ಹಾಗೂ ಈಶಾನ್ಯ ಭಾರತದ ಕೆಲವು ಆದಿವಾಸಿ ಸಮುದಾಯದಲ್ಲಿ ಮಾತೃಪ್ರಧಾನ ಕುಟುಂಬಗಳು ಕಂಡು ಬರುತ್ತವೆ. ಒಟ್ಟಾರೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಎಂದರೆ ಮಹಿಳೆ ಒಡೆತನದ ವಹಿವಾಟು ಮತ್ತು ಮಹಿಳೆಯನ್ನು ಅನುಸರಿಸುವ ಅನುವಂಶಿಕ ಅಧಿಕಾರ ಮತ್ತು ಹಕ್ಕುಗಳು ತಾಯಿಯಿಂದ ಮಕ್ಕಳಿಗೆ ಲಭಿಸುವುದು.

## ಪಿತೃಪ್ರಧಾನ ಕುಟುಂಬ:

ಪಿತೃಪ್ರಧಾನ ಕುಟುಂಬದಲ್ಲಿ ತಂದೆಯೇ ಕುಟುಂಬದ ಪ್ರಮುಖ. ಆಸ್ತಿಯ ಹಕ್ಕು ಮತ್ತು ಇತರೆ ಹಕ್ಕುಗಳು ಪುರುಷ ಕೇಂದ್ರಿತವಾಗಿವೆ. ಪಿತೃಪ್ರಧಾನ ಕುಟುಂಬದಲ್ಲಿ ವಿವಾಹಿತ ಹೆಣ್ಣುಮಕ್ಕಳು ಗಂಡನ ಮನೆಯಲ್ಲಿ ವಾಸಿಸುತ್ತಾರೆ. ಈ ಕುಟುಂಬ ವ್ಯವಸ್ಥೆಯಲ್ಲಿ ಕುಟುಂಬದ ಹಿರಿಯ ಮಗನಿಗೆ ಧಾರ್ಮಿಕ ಆಚರಣೆಯಲ್ಲಿ ಪ್ರಮುಖ ಸ್ಥಾನವಿದೆ. ಪಿತೃಪ್ರಧಾನ ಕುಟುಂಬ ವ್ಯವಸ್ಥೆಯು ಗ್ರೀಕ್, ರೋಮ್, ಭಾರತ ಮತ್ತು ನೆರೆಯ ಚೀನಾ ದೇಶಗಳಲ್ಲಿ ಬಹಳ ಹಿಂದಿನಿಂದಲೂ ಆಚರಣೆಯಲ್ಲಿ ಇದ್ದು, ಈಗಲೂ ಮುಂದುವರೆದಿದೆ.

## ಆಧುನಿಕ ಕೇಂದ್ರ ಕುಟುಂಬ:

ಕುಟುಂಬದ ರಚನೆ ಮತ್ತು ಅದರಲ್ಲಿ ವಾಸಿಸುವ ಪೀಳಿಗೆಗಳ ಸಂಖ್ಯೆಯ ಆಧಾರದ ಮೇಲೆ ಕುಟುಂಬಗಳನ್ನು 'ಕೇಂದ್ರ ಕುಟುಂಬ', 'ಅವಿಭಕ್ತ ಕುಟುಂಬ' ಮತ್ತು 'ವಿಸ್ತೃತ ಕುಟುಂಬ' ಎಂಬುದಾಗಿ ವರ್ಗೀಕರಿಸುತ್ತೇವೆ. ತಂದೆ, ತಾಯಿ ಮತ್ತು ಅವರ ಅವಿವಾಹಿತ ಮಕ್ಕಳು ಮಾತ್ರ ಸದಸ್ಯರಾಗಿರುವ ಕುಟುಂಬವನ್ನು 'ಕೇಂದ್ರ ಕುಟುಂಬ' ಎಂಬುದಾಗಿ ಕರೆಯುತ್ತೇವೆ. ಕೇಂದ್ರ ಕುಟುಂಬಗಳು ಆಧುನಿಕ ಸಮಾಜದಲ್ಲಿ ಹೆಚ್ಚಳವಾಗಿವೆ. ವೈಯಕ್ತಿಕತೆ, ವೈಯಕ್ತಿಕ ಸಂತೋಷ, ಸುಖ, ಆಸ್ತಿಯ ಹಕ್ಕು ಬದಲಾದ ಸಾಮಾಜಿಕ ಮೌಲ್ಯಗಳು, ವಿಜ್ಞಾನ ಹಾಗೂ ತಂತ್ರಜ್ಞಾನದಲ್ಲಿ ಆದ ಪ್ರಗತಿ, ನಗರೀಕರಣ, ಪ್ರಜಾಸತಾತ್ಮಕ ಹಾಗೂ ಸಮಾನತೆಯ ತತ್ವಗಳು ಇವೆ ಮುಂತಾದ ಅನೇಕ ಅಂಶಗಳು ಕೇಂದ್ರ ಕುಟುಂಬದ ಹೆಚ್ಚಳಕ್ಕೆ ಕಾರಣವಾಗಿವೆ. ಕೇಂದ್ರ ಕುಟುಂಬದಲ್ಲಿ ಕಂಡುಬರುವ ಪ್ರಮುಖ ಲಕ್ಷಣಗಳು ಈ ಕೆಳಗಿನಂತಿವೆ:

1. ಗಾತ್ರದಲ್ಲಿ ಚಿಕ್ಕದ್ದು.
2. ಸರಳ ಸಾಮಾಜಿಕ ನಿಯಂತ್ರಣ
3. ಆಧುನಿಕ ತಂತ್ರಜ್ಞಾನಕ್ಕೆ ಒಲವು
4. ಸದಸ್ಯರಿಗೆ ಹೆಚ್ಚಿನ ಸ್ವಾತಂತ್ರ
5. ಸಂಕೀರ್ಣತೆ

## ಅವಿಭಕ್ತ ಕುಟುಂಬ:

ಅವಿಭಕ್ತ ಕುಟುಂಬದಲ್ಲಿ ಅಜ್ಜ-ಅಜ್ಜಿ ಅವರ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು ಕೆಲವು ಸಂದರ್ಭಗಳಲ್ಲಿ ಇನ್ನೂ ವಿಸ್ತೃತವಾಗಿ ಎರಡು ತಲೆಮಾರುಗಳಿಗಿಂತಲೂ ಹೆಚ್ಚಿನ ಜನರು ಇರುತ್ತಾರೆ. ಇಡೀ ಕುಟುಂಬ ಒಂದೇ ಬಗೆಯ ಧಾರ್ಮಿಕ ಆಚರಣೆಗಳನ್ನು ಹೊಂದಿರುತ್ತವೆ. ಅವಿಭಕ್ತ ಕುಟುಂಬವು ಸಾಮಾನ್ಯವಾಗಿ ರಕ್ತಸಂಬಂಧಿಗಳಿಂದ ಕೂಡಿರುವ ಗುಂಪಾಗಿರುತ್ತದೆ.



**ಚಟುವಟಿಕೆ:** ನೀವೇ ಮಾಡಿ ನಿಮ್ಮ ಮುತ್ತಾತನ ಕಾಲದಿಂದ ಇಂದಿನವರೆಗಿನ ವಂಶಾವಳಿಯನ್ನು ಕುಟುಂಬದ ಹಿರಿಯರೊಂದಿಗೆ ಚರ್ಚಿಸಿ ವಂಶವೃಕ್ಷ ರಚಿಸಿ

*ಅವಿಭಕ್ತ ಕುಟುಂಬದ ಲಕ್ಷಣಗಳು*

**ಗಾತ್ರದಲ್ಲಿ ದೊಡ್ಡದು:** ಎರಡು ತಲೆಮಾರಿಗಿಂತಲೂ ಹೆಚ್ಚಿನ ಜನರು ಒಂದೇ ಮನೆಯಲ್ಲಿ ವಾಸ ಮಾಡುವುದರಿಂದ ಈ ಕುಟುಂಬದ ಸದಸ್ಯರ ಸಂಖ್ಯೆ ಹೆಚ್ಚಾಗಿರುತ್ತವೆ. ಅದರಿಂದ ಕುಟುಂಬದ ಗಾತ್ರ ದೊಡ್ಡದಾಗಿರುತ್ತದೆ.

**ಸಹಕಾರ ಸಹಭಾಗಿತ್ವ:** ಅವಿಭಕ್ತ ಕುಟುಂಬದಲ್ಲಿ ಸದಸ್ಯರ ಪರಸ್ಪರ ಸಹಕಾರದಿಂದ ದಿನನಿತ್ಯದ ಚಟುವಟಿಕೆಗಳು ಸೇರಿದಂತೆ ಎಲ್ಲ ಕಾರ್ಯಗಳು ನಡೆಯುತ್ತಿರುತ್ತವೆ. ಕುಟುಂಬದ ಹಿರಿಯರು ಮುಖ್ಯಸ್ಥನಾಗಿ ಕೆಲಸ ಮಾಡಿದರೂ ಸಹ, ಇವರು ಕುಟುಂಬದ ಇತರೆ ಸದಸ್ಯರೊಟ್ಟಿಗೆ ಚರ್ಚಿಸಿ ಕೆಲವು ನಿರ್ಧಾರಗಳನ್ನು ತೆಗೆದುಕೊಳ್ಳುತ್ತಿರುತ್ತಾರೆ. ಕುಟುಂಬದ ಎಲ್ಲ ಚಟುವಟಿಕೆ ಮತ್ತು ಆಚರಣೆಗಳಲ್ಲಿ ಕುಟುಂಬದ ಎಲ್ಲಾ ಸದಸ್ಯರು ಭಾಗವಹಿಸುವುದನ್ನು ನಾವು ಕಾಣಬಹುದು. ವಯಸ್ಸು, ಲಿಂಗ ಮತ್ತು ಶ್ರಮದ ಆಧಾರದಲ್ಲಿ ಕೆಲಸ ಕಾರ್ಯಗಳ ವಿಭಜನೆಯನ್ನು ನಾವು ಇಲ್ಲಿ ಕಾಣಬಹುದು.

**ವಾಸಸ್ಥಾನ ಮತ್ತು ಅಡುಗೆ ಮನೆ:** ಅವಿಭಕ್ತ ಕುಟುಂಬದ ಸದಸ್ಯರೆಲ್ಲರೂ ಒಂದೇ ಸೂರಿನಡಿ ವಾಸಿಸುತ್ತಾರೆ. ಬೇರೆ ಬೇರೆ ಕಾರಣಗಳಿಗೆ (ವೃತ್ತಿ, ದುಡಿಮೆ, ಶಿಕ್ಷಣ) ಪ್ರತ್ಯೇಕ ಸ್ಥಳಗಳಲ್ಲಿ ಮನೆಮಾಡಿ ವಾಸಿಸುತ್ತಿದ್ದರೂ ಸಹ ಧಾರ್ಮಿಕ ಆಚರಣೆ ಸಂದರ್ಭಗಳಲ್ಲಿ, ಹಬ್ಬಗಳಲ್ಲಿ ಎಲ್ಲರೂ ಮೂಲ ಕುಟುಂಬದೊಂದಿಗೆ ಸಂಬಂಧವನ್ನು ಮುಂದುವರೆಸಿಕೊಂಡು ಹೋಗುತ್ತಿರುವುದನ್ನು ನಾವು ಕಾಣುತ್ತೇವೆ. ಅಲ್ಲದೆ ಅವಿಭಕ್ತ ಕುಟುಂಬದ ಸದಸ್ಯರೆಲ್ಲರೂ ಒಂದೇ ಅಡುಗೆ ಮನೆಯಲ್ಲಿ ಆಹಾರವನ್ನು ಸಿದ್ಧಪಡಿಸಿ ಒಟ್ಟಿಗೆ ಊಟ ಮಾಡುತ್ತಾರೆ.

**ಧರ್ಮ:** ಅವಿಭಕ್ತ ಕುಟುಂಬದ ಸದಸ್ಯರೆಲ್ಲರೂ ಒಂದೇ ಧರ್ಮವನ್ನು ನಂಬುತ್ತಾರೆ ಮತ್ತು ಆಚರಿಸುತ್ತಾರೆ. ಇವರ ಪೂಜಾ ಆಚರಣೆಗಳು ಮತ್ತು ನಂಬಿಕೆಗಳು ಒಂದೇ ರೀತಿ ಇರುತ್ತವೆ.

**ಸ್ವಯಂಪೂರ್ಣ ಘಟಕ:** ಅವಿಭಕ್ತ ಕುಟುಂಬವು ಸ್ವಯಂ ಪೂರ್ಣ ಘಟಕವಾಗಿ ಕಂಡು ಬರುತ್ತವೆ. ತನ್ನ ಕುಟುಂಬದ ಸದಸ್ಯರಿಗೆ ಬೇಕಾಗುವ ಬಹುಪಾಲು ಅಗತ್ಯಗಳನ್ನು ಪೂರೈಸುತ್ತದೆ.

**ಅಧಿಕಾರ ಸಂರಚನೆ:** ಅವಿಭಕ್ತ ಕುಟುಂಬದ ಹಿರಿಯ ಸದಸ್ಯರು ರಚನೆಯ ಅಧಿಕಾರ ಮತ್ತು ಜವಾಬ್ದಾರಿಯನ್ನು ಹೊಂದಿರುತ್ತಾರೆ. ಇವರಿಗೆ ಕುಟುಂಬದ ಪ್ರಮುಖ ವಿಷಯದಲ್ಲಿ ನಿರ್ಧಾರವನ್ನು ತೆಗೆದುಕೊಳ್ಳುವ ಅಧಿಕಾರ ಇರುತ್ತದೆ. ಅಧಿಕಾರದ ಹಸ್ತಾಂತರ ಕೂಡ ಸಂಪ್ರದಾಯಿಕವಾಗಿ ಮನೆಯ ಹಿರಿತನದ ಆಧಾರದ ಮೇಲೆ ಹಸ್ತಾಂತರವಾಗುತ್ತದೆ.

**ಚಟುವಟಿಕೆ:** ನಿಮ್ಮ ತಾತನ ಕಾಲದಲ್ಲಿ ಇದ್ದ ನಿಮ್ಮ ಅವಿಭಕ್ತ ಕುಟುಂಬದಲ್ಲಿನ ಸದಸ್ಯರ ಸಂಖ್ಯೆ (ಪುರುಷ-ಮಹಿಳೆ) ಹಾಗೂ ಅವರು ನಿರ್ವಹಿಸುತ್ತಿದ್ದ ಕಾರ್ಯ ಜವಾಬ್ದಾರಿಗಳ ಬಗ್ಗೆ ನಿಮ್ಮ ತಂದೆಯವರ ಜೊತೆ ಮಾಹಿತಿ ಪಡೆಯಿರಿ.

## ಅಭ್ಯಾಸಗಳು

**I. ಖಾಲಿ ಬಿಟ್ಟಿರುವ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿರಿ.**

1. ಕುಟುಂಬ ಎಂಬ ಪದವು ಲ್ಯಾಟಿನ್ ಭಾಷೆಯ _______ ಪದದಿಂದ ಉಗಮವಾಗಿದೆ.
2. ಸಮಾಜದ ಜೀವಕೋಶ _______ ಆಗಿದೆ.
3. ತಂದೆಯೇ ಕುಟುಂಬದ ಒಡೆಯನಾದರೆ ಆ ಕುಟುಂಬವನ್ನು _______ ಎನ್ನುತ್ತಾರೆ.
4. ಕೇರಳದ ಮಲಬಾರ್ನ ನಾಯರ್‌ಗಳಲ್ಲಿ _______ ಕುಟುಂಬ ಕಂಡುಬರುತ್ತದೆ.

**II. ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

1. ಕುಟುಂಬವು ಸಮಾಜದ ಘಟಕ ಹೇಗೆ?
2. ಕುಟುಂಬದ ಪ್ರಕಾರಗಳನ್ನು ತಿಳಿಸಿ.
3. ಅವಿಭಕ್ತ ಕುಟುಂಬ ಎಂದರೇನು?

4. ಕೇಂದ್ರ ಕುಟುಂಬ ಎಂದರೇನು?
5. ಕುಟುಂಬದ ಲಕ್ಷಣಗಳು ಯಾವುವು?
6. ವ್ಯಕ್ತಿಯ ಸಾಮಾಜಿಕ ಬೆಳವಣಿಗೆಯ ಹಂತಗಳಲ್ಲಿ ಕುಟುಂಬದ ಪಾತ್ರವನ್ನು ತಿಳಿಸಿ.
7. ಅವಿಭಕ್ತ ಕುಟುಂಬದ ಲಕ್ಷಣಗಳನ್ನು ವಿವರಿಸಿ.
8. ಆಧುನಿಕ ಕೇಂದ್ರ ಕುಟುಂಬಗಳು ದಿನೇದಿನೇ ಹೆಚ್ಚಾಗಲು ಕಾರಣಗಳೇನು?

**III. ಚಟುವಟಿಕೆ**

1. ವಿಭಕ್ತ- ಅವಿಭಕ್ತ ಕುಟುಂಬಗಳ ಅನುಕೂಲ- ಅನಾನುಕೂಲಗಳ ಬಗ್ಗೆ ಚರ್ಚೆ ನಡೆಸಿ.
2. ಆದಿವಾಸಿ ಕುಟುಂಬ ವ್ಯವಸ್ಥೆಯನ್ನು ತಿಳಿಯಲು ಆದಿವಾಸಿ ಸ್ಥಳಗಳಿಗೆ ಭೇಟಿ ನೀಡಿ.

**IV. ನಿಯೋಜಿತ ಕಾರ್ಯಗಳು**

3. ಮಾತೃಪ್ರಧಾನ- ಪಿತೃಪ್ರಧಾನ ಕುಟುಂಬ ಪದ್ಧತಿಯ ಬಗ್ಗೆ ಹೆಚ್ಚಿನ ಮಾಹಿತಿ ಸಂಗ್ರಹಿಸಿರಿ.
4. ನಿಮ್ಮ ಮುತ್ತಾತನ ಕಾಲದಿಂದ ಇಂದಿನವರೆಗಿನ ವಂಶಾವಳಿಯನ್ನು ಕುಟುಂಬದ ಹಿರಿಯರೊಂದಿಗೆ ಚರ್ಚಿಸಿ ವಂಶವೃಕ್ಷ ರಚಿಸಿ.

## ಅಧ್ಯಾಯ- 2 ಸಾಮಾಜೀಕರಣ

**ಈ ಅಧ್ಯಾಯದಲ್ಲಿ ಕೆಳಗಿನ ಅಂಶಗಳನ್ನು ತಿಳಿಯುತ್ತೇವೆ.**

1. ಸಾಮಾಜೀಕರಣದ ಅರ್ಥ.
2. ಸಾಮಾಜೀಕರಣದ ಕಾರ್ಯಗಳು.
3. ಸಾಮಾಜೀಕರಣದ ನಿಯೋಗಿಗಳು/ ಸಾಧನಗಳು.
4. ಲಿಂಗ ಮತ್ತು ಸಾಮಾಜೀಕರಣ.

### ಸಾಮಾಜೀಕರಣದ ಅರ್ಥ

ಸಮಾಜವು ಅಸ್ತಿತ್ವದಲ್ಲಿ ಇರುವುದು ವ್ಯಕ್ತಿಗಳ ಸಾಮೂಹಿಕ ನಡವಳಿಕೆಯ ಜೀವನದಿಂದ. ಮಾನವ ಸಮಾಜ ಜೀವಿ. ಮಾನವ ಶಿಶು ಹುಟ್ಟಿದಾಗ ಕೇವಲ ಒಂದು ಜೀವವಾಗಿ, ಪ್ರಾಣಿಯಾಗಿ ಇರುತ್ತಾನೆ/ ಳೆ. ನಂತರ ಸಮಾಜ ಜೀವಿಯಾಗಿ ರೂಪುಗೊಳ್ಳುತ್ತಾರೆ. ಶಿಶು ಮಗುವಾಗಿ ಬೆಳೆಯತೊಡಗಿದ ಕ್ಷಣದಿಂದಲೇ ಸಮಾಜದ ವರ್ತನೆಗಳನ್ನು ಕಲಿಯಲು ಪ್ರಾರಂಭಿಸುತ್ತದೆ. ಸಾಮಾಜಿಕ ವರ್ತನೆಗಳ ಕಲಿಕೆ- ಪ್ರಕ್ರಿಯೆಯನ್ನು ಅಂದರೆ ಸಾಮಾಜಿಕ ವ್ಯಕ್ತಿಯಾಗಿ ರೂಪುಗೊಳ್ಳುವ ಕ್ರಿಯೆಯನ್ನು 'ಸಾಮಾಜೀಕರಣ' ಎಂದು ಕರೆಯುತ್ತಾರೆ. ಮಗುವು ಮಾತನಾಡುವ ಶಕ್ತಿ ಮತ್ತು ಯೋಚಿಸುವ ಶಕ್ತಿಯನ್ನು ಪಡೆದುಕೊಂಡ ಕ್ಷಣದಲ್ಲಿಯೇ ಸಮಾಜದಲ್ಲಿ ಇರುವ ಇತರ ವ್ಯಕ್ತಿಗಳ ಸಂಗಡ ಸಂಪರ್ಕವನ್ನು ಬೆಳೆಸಿಕೊಂಡು ಬರುತ್ತದೆ. ಇತರರೊಡನೆ ಸಂವಾದ ಮಾಡಲು ಪ್ರಯತ್ನಿಸುತ್ತದೆ. ಆಟವಾಡುವ ಮೂಲಕ ತನ್ನ ಹತ್ತಿರದವರನ್ನು ಅನುಕರಿಸಲು ಪ್ರಾರಂಭಿಸುತ್ತದೆ. ಹೀಗೆ ಅದು ಹಂತ ಹಂತವಾಗಿ ಸಾಮಾಜಿಕ ಪರಿಸರದ ಪ್ರಭಾವಕ್ಕೆ ಒಳಗಾಗುತ್ತದೆ. ಈ ಪ್ರಕ್ರಿಯೆಯಲ್ಲಿ ಸಾಮಾಜಿಕ ಅವಲಂಬನೆ ಕಂಡು ಬರುತ್ತದೆ.

'ಸಾಮಾಜೀಕರಣ' ಎಂದರೆ ಸಮಾಜದ ಜೀವಿಗಳಲ್ಲಿ ಪರಸ್ಪರ ಅವಲಂಬನೆ ಉಂಟಾಗಿ ಅವರೆಲ್ಲರೂ ನಮ್ಮ ನಮ್ಮ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ಅರಿತು ಜೀವಿಸುವ ಕ್ರಮಬದ್ಧ ಪ್ರಕ್ರಿಯೆ.

ಸಾಮಾಜೀಕರಣ ಪ್ರಕ್ರಿಯೆಯು ಹುಟ್ಟಿನಿಂದ ಸಾವಿನವರೆಗೆ ನಡೆಯುವ ನಿರಂತರ ಸಾಮಾಜಿಕ ಕ್ರಿಯೆ. ಮಾನವನ ಹುಟ್ಟಿನಿಂದ ಬರುವ ಸಹಜ ಪ್ರವೃತ್ತಿಗಳು ಸಾಮಾಜಿಕ ವರ್ತನೆಗಳ ಪ್ರಭಾವಕ್ಕೆ ಒಳಗಾಗಿ ಸಾಮಾಜಿಕ ಪರಿಸರ ಮತ್ತು ಪರಿಸ್ಥಿತಿಗಳಿಗೆ ತಕ್ಕಂತೆ ರೂಪುಗೊಳ್ಳುತ್ತವೆ. ಅಷ್ಟು ಮಾತ್ರವಲ್ಲದೆ, ಸಾಮಾಜಿಕ ವರ್ತನೆಗಳನ್ನು ಅಳವಡಿಸಿಕೊಂಡು ಸಮಾಜ ಜೀವಿಯಾಗಿ ಮನುಷ್ಯರು ರೂಪಾಂತರಗೊಳ್ಳುತ್ತಾರೆ. ಇದನ್ನೇ ಸಾಮಾಜೀಕರಣ ಎಂದು ಕರೆಯುತ್ತಾರೆ.

## ಸಾಮಾಜೀಕರಣದ ಕಾರ್ಯಗಳು

1. ಮಾನವ ಜೀವಿಯನ್ನು ಸಾಮಾಜಿಕ ಜೀವಿಯನ್ನಾಗಿಸುತ್ತದೆ.
2. ವಿವಿಧ ಕೌಶಲ್ಯಗಳ ಕಲಿಕೆ ಮತ್ತು ಅಳವಡಿಕೆಗೆ ಅವಕಾಶ ಒದಗಿಸುತ್ತದೆ.
3. ಸಾಮಾಜಿಕ ಸಂಬಂಧಗಳನ್ನು ಬೆಳೆಸುತ್ತದೆ ಮತ್ತು ಸಾಮಾಜಿಕ ವ್ಯವಸ್ಥೆಗೆ ಬದ್ಧತೆ ಮತ್ತು ಬೆಂಬಲವನ್ನು ನೀಡುತ್ತದೆ.
4. ವ್ಯಕ್ತಿತ್ವದ ಬೆಳವಣಿಗೆಗೆ ಸಹಾಯ ಮಾಡುತ್ತದೆ.
5. ಪರಂಪರೆಯ ಮುಂದುವರಿಕೆಗೆ ಸಹಕಾರಿಯಾಗಿದೆ.

## ಸಾಮಾಜೀಕರಣದ ನಿಯೋಗಿಗಳು/ ಸಾಧನಗಳು

ಸಾಮಾಜೀಕರಣದ ಮೇಲೆ ಪ್ರಭಾವ ಬೀರುವ ಅಂಶಗಳಲ್ಲಿ ಮುಖ್ಯವಾಗಿ ಎರಡು ವಿಧಗಳನ್ನು ಗುರುತಿಸಬಹುದು. ಮೊದಲನೆಯದಾಗಿ ವಯಸ್ಸು, ಅನುಭವ ಮತ್ತು ಹಿರಿಯರ ಪ್ರಭಾವ. ಎರಡನೆಯದು ಸಮವಯಸ್ಕರು ಉಂಟುಮಾಡುವ ಪ್ರಭಾವ. ಮೊದಲನೆಯ ವಿಭಾಗದಲ್ಲಿ ತಾಯಿ, ತಂದೆ, ಗುರುಹಿರಿಯರು ಹಾಗೂ ಇತರರನ್ನು ಸೇರಿಸಬಹುದು. ಎರಡನೆಯ ವಿಭಾಗದಲ್ಲಿ ಸ್ನೇಹಿತರು ಹಾಗೂ ಸಮವಯಸ್ಕರನ್ನು ಸೇರಿಸಬಹುದು. ಇದರ ಆಧಾರದ ಮೇಲೆ ಈ ಕೆಳಗಿನ ಅಂಶಗಳನ್ನು ಸಮಾಜೀಕರಣದ ನಿಯೋಗಿಗಳೆಂದು ಗುರುತಿಸಬಹುದು.

### *1. ಕುಟುಂಬ:*

ಮಗುವಿನ ಸಮಾಜೀಕರಣದಲ್ಲಿ ಕುಟುಂಬದ ಪಾತ್ರ ಬಹಳ ಮುಖ್ಯವಾದುದು. ತಂದೆ ತಾಯಿ ಮಗುವಿಗೆ ನೇರವಾಗಿ ರಕ್ತಸಂಬಂಧಿಗಳು ಆಗುತ್ತಾರೆ. ತಾಯಿಯೇ ಮಗುವಿನ ಮೊದಲ ಗುರು ಎಂಬ ನಾಣ್ಣುಡಿ ಅಕ್ಷರಶಃ ನಿಜ. ತಾಯಿ ತಂದೆಯರ ನಡೆ-ನುಡಿ, ಆಚಾರ-ವಿಚಾರ, ಚಟುವಟಿಕೆಗಳು, ವ್ಯವಹರಿಸುವಿಕೆ ಮೊದಲಾದ ಅಂಶಗಳು ಮಗುವಿನ ಭಾವನಾತ್ಮಕ ಬೆಳವಣಿಗೆಯ ಮೇಲೆ ಬಹಳ ಪ್ರಭಾವ ಬೀರುತ್ತವೆ. ಪ್ರೀತಿ, ವಾತ್ಸಲ್ಯ, ವಿಶ್ವಾಸ, ಸಹನೆ, ಸಹೃದಯತೆ, ಸಹಕಾರ ಮೊದಲಾದ ಜೀವನ ಮೌಲ್ಯಗಳ ಮೊದಲ ಪಾಠಗಳನ್ನು ಮಗುವು ಮನೆಯಲ್ಲಿಯೇ ಕಲಿಯುತ್ತದೆ. ಕುಟುಂಬದ ಹೊಗಳಿಕೆಗಳು ಆಕೆಯ/ ಆತನ ಚಟುವಟಿಕೆಗಳಿಗೆ ಉತ್ತೇಜನಕಾರಿಯಾಗುತ್ತವೆ. ತಂದೆ-ತಾಯಿಯರು ವಯಸಿನಲ್ಲಿ, ಅನುಭವದಲ್ಲಿ, ಅಧಿಕಾರದಲ್ಲಿ ಹಿರಿಯರಾದ್ದರಿಂದ ಮಕ್ಕಳು ವಿಧೇಯತೆಯಿಂದ ನಡೆದುಕೊಳ್ಳುತ್ತಾರೆ. ತಾಯಿ-ತಂದೆಯರ ಒಡನಾಟದ ಪರಿಸರದಿಂದ ಪ್ರಭಾವಿತರಾಗುತ್ತಾರೆ.

ಹೀಗೆ ಮಕ್ಕಳ ಮನಸ್ಸು ಸಾಮಾಜೀಕರಣದಿಂದಾಗಿ ಅರಳುತ್ತದೆ ಹಾಗೂ ಪ್ರಫುಲವಾಗುತ್ತದೆ. ಇದಕ್ಕೆ ಬುನಾದಿಯೇ ಕುಟುಂಬ.

### *2. ಸಮವಯಸ್ಕರ ಗುಂಪು:*

ಸಾಮಾಜೀಕರಣದ ಬಹುಮುಖ್ಯ ನಿಯೋಗಿ ಸಮವಯಸ್ಕರ ಗುಂಪು. ಈ ಗುಂಪಿನಲ್ಲಿ ಸಹಪಾಠಿಗಳು, ಜೊತೆಯ ಆಟಗಾರರು ಮತ್ತು ಸ್ನೇಹಿತರು ಇರುತ್ತಾರೆ. ಈ ಸಂಬಂಧವು ಸಹಕಾರ ಹಾಗೂ ಪರಸ್ಪರ ಹೊಂದಾಣಿಕೆಯನ್ನು ಆದರಿಸುತ್ತದೆ. ಇವರು ಸಾಮಾನ್ಯವಾಗಿ ಒಂದೇ ವಯಸ್ಸಿನವರಾಗಿದ್ದು, ತನ್ನ ಪೋಷಕರಿಂದ ಮತ್ತು ಶಿಕ್ಷಕರಿಂದ ತಿಳಿಯಲಾಗದ ಸಾಮಾಜಿಕ ವರ್ತನೆಯ ವಿಷಯಗಳನ್ನು ಸ್ನೇಹಿತರಿಂದ ಮಕ್ಕಳು ತಿಳಿಯುತ್ತಾರೆ. ಈ ಅರಿವು ಸಾಮಾಜಿಕ ಸಂಬಂಧಗಳು ಮತ್ತು ನಡವಳಿಕೆಯ ದೃಷ್ಟಿಯಿಂದ ಅತ್ಯಂತ ಅಗತ್ಯ ಮತ್ತು ಮಹತ್ವದ್ದಾಗಿದೆ.

### *3. ಧರ್ಮ:*

ಸಾಮಾಜೀಕರಣ ಪ್ರಕ್ರಿಯೆಯಲ್ಲಿ ಧರ್ಮದ ಪಾತ್ರವೂ ಇದೆ. ಮನುಷ್ಯರು ನಂಬಿದ ಧರ್ಮವು ಸಾಮಾಜಿಕ ಜೀವನಕ್ಕೆ ಆದರ್ಶದ ತಳಹದಿ ಹಾಕುತ್ತದೆ. ನೀತಿಯುತವಾದ ಜೀವನ ನಡೆಸಲು ಬೋಧಿಸುತ್ತದೆ. ತಂದೆ-ತಾಯಿಯರು, ಹಿರಿಯರು, ಸಂಬಂಧಿಗಳು, ಧಾರ್ಮಿಕ ಸ್ಥಳಗಳಿಗೆ ಭೇಟಿ ನಿಡುವುದಲ್ಲದೆ ನಂಬಿಕೆ, ಪೂಜೆ, ಹಬ್ಬ, ಜಾತ್ರೆ, ಉತ್ಸವ ಮೊದಲಾದ ಸಾಮಾಜಿಕ ಚಟುವಟಿಕೆ ಮತ್ತು ಆಚರಣೆಯಲ್ಲಿ ಭಾಗವಹಿಸುವ ಮೂಲಕ ಧಾರ್ಮಿಕ ಚಟುವಟಿಕೆಗಳನ್ನು ಮಕ್ಕಳಲ್ಲಿ ಮೈಗೂಡಿಸಿಕೊಳ್ಳುವಂತೆ ಮಾಡುತ್ತಾರೆ. ಇದನ್ನು ಎಲ್ಲಾ ಧರ್ಮಗಳು ಬೇರೆ ಬೇರೆ ವಿಧಾನದಲ್ಲಿ ಮಾಡುತ್ತವೆ.

### *4. ಶಾಲೆ:*

ಮಗುವಿನ ಸಾಮಾಜೀಕರಣದಲ್ಲಿ ಶಾಲೆಯ ಪಾತ್ರ ಮಹತ್ವಪೂರ್ಣವಾದದ್ದು. ಶಾಲೆಯಲ್ಲಿ ಶಿಕ್ಷಣದ ಪ್ರಭಾವದ ಜೊತೆಗೆ ಸಹ ವಿದ್ಯಾರ್ಥಿಗಳು ಮತ್ತು ಸ್ನೇಹಿತರ ವ್ಯಕ್ತಿತ್ವದ ಪ್ರಭಾವಕ್ಕೆ ಮಕ್ಕಳು ಒಳಪಡುತ್ತಾರೆ. ಶಿಕ್ಷಣದಿಂದ ಮಗುವಿನ ಸಾಮಾಜಿಕ ವರ್ತನೆ, ಜ್ಞಾನ ಮತ್ತು ಅನುಭವಗಳು ರೂಪುಗೊಳ್ಳುತ್ತವೆ. ಮಕ್ಕಳ ಸುಪ್ತಶಕ್ತಿ ಸಾಮರ್ಥ್ಯಗಳು ಬೆಳೆಯುತ್ತವೆ. ಅವನ/ ಳ ಜೀವನವನ್ನು ವಿಶಾಲಗೊಳಿಸಿ, ಅವರನ್ನು ಸಾಮಾಜಿಕ ಜೀವನಕ್ಕೆ ಅಣಿಗೊಳಿಸುತ್ತವೆ. ಮಗುವಿನ ಸಾಮಾಜೀಕರಣದಲ್ಲಿ ಶಿಕ್ಷಕರ ಪಾತ್ರ ಮಹತ್ವ ಪೂರ್ಣವಾದುದು. ಸನ್ನಡತೆ, ಸದ್ಭಾವನೆ, ಸಮಾನತೆ, ಮುಂತಾದ ಗುಣಗಳು ಶಿಕ್ಷಕರ ನಡೆನುಡಿಯಲ್ಲಿ ಅಭಿವ್ಯಕ್ತವಾಗಿ ಮಕ್ಕಳಿಗೆ ಪ್ರೀತಿ, ವಿಶ್ವಾಸ, ಸಹನೆ, ಸಹಬಾಳ್ವೆ, ಸಹಜೀವನ, ಸಹೃದಯತೆ ಮೊದಲಾದ ಜೀವನ ಮೌಲ್ಯಗಳನ್ನು ಮೈಗೂಡಿಸಿಕೊಳ್ಳುವಂತೆ ಮಾಡುತ್ತವೆ. ಜೊತೆಗೆ ಮಕ್ಕಳು ಪಠ್ಯೇತರ ಚಟುವಟಿಕೆಗಳು, ರಚನಾತ್ಮಕ ಕಾರ್ಯಕ್ರಮಗಳಲ್ಲಿ ಭಾಗವಹಿಸುವಂತೆ ಪ್ರೇರೇಪಿಸುತ್ತದೆ.



### 5. ಸಮೂಹ ಮಾಧ್ಯಮ:

ಆಧುನಿಕ ಸಮಾಜದಲ್ಲಿ ಸಮೂಹ ಮಾಧ್ಯಮಗಳು ಸಾಮಾಜೀಕರಣದ ಪ್ರಮುಖ ನಿಯೋಗಿಯಾಗಿ ಕೆಲಸ ಮಾಡುತ್ತವೆ. ರೇಡಿಯೋ, ದೂರದರ್ಶನ, ಚಲನಚಿತ್ರ, ಸುದ್ದಿಪತ್ರಿಕೆಗಳು, ನಿಯತಕಾಲಿಕೆಗಳು, ಬೀದಿನಾಟಕಗಳು ಮೊದಲಾದ ಸಮೂಹ ಮಾಧ್ಯಮಗಳು ಸಾಹಿತ್ಯವನ್ನು ವಿಪುಲವಾಗಿ ಬಳಸುತ್ತವೆ. ಜಾಹೀರಾತು, ರೇಡಿಯೊ ಕಾರ್ಯಕ್ರಮಗಳು, ಕಥೆ, ಕವನ, ಕಾದಂಬರಿಗಳು, ನಾಟಕ, ನೃತ್ಯರೂಪಕ, ಸಂಗೀತ, ಭಿತ್ತಿಪತ್ರ, ಮಹಾನ್‌ವ್ಯಕ್ತಿಗಳ ವಿಶೇಷ ಹೇಳಿಕೆಗಳು, ಅನುಭವದ ನುಡಿಗಳಿಂದ ನಾವು ಆಳವಾಗಿ ಪ್ರಭಾವಿತರಾಗುತ್ತೇವೆ. ವಾರ್ತೆಗಳು, ರಸಪ್ರಶ್ನೆ ಕಾರ್ಯಕ್ರಮಗಳು, ಪರಿಚಯ, ಸಂವಾದ, ವಿಚಾರ ಸಂಕಿರಣ ವಿವಿಧ ಸ್ಥಳಗಳ ವೀಕ್ಷಣೆ, ಅನ್ವೇಷಣೆ ಮೊದಲಾದವುಗಳಿಂದ ಸಮೂಹ ಮಾಧ್ಯಮಗಳ ಸದ್ಬಳಕೆಯಾಗುತ್ತದೆ. ಹಾಗೆಯೇ ಉತ್ತಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಸಹಾಯಕವಾಗುವ, ಶೈಕ್ಷಣಿಕ ಮಹತ್ವವುಳ್ಳ ಕಾರ್ಯಕ್ರಮಗಳು ಮಹತ್ವದ ಪರಿಣಾಮವನ್ನು ಮಕ್ಕಳ ಸಾಮಾಜಿಕ ವರ್ತನೆಯಲ್ಲಿ ಬೀರುತ್ತವೆ.

### 6. ನೆರೆಹೊರೆ (Neighbourhood):

ನೆರೆಹೊರೆ ಎಂದರೆ ಅಕ್ಕಪಕ್ಕದವರು ಎಂದರ್ಥ. ಇದು ಸಾಮುದಾಯಿಕ ಗುಣಗಳನ್ನು ಹೊಂದಿರುವ ಚಿಕ್ಕ ಸಮೂಹ. ನೆರೆಹೊರೆ ಗಾತ್ರದಲ್ಲಿ ಚಿಕ್ಕದಾಗಿರುತ್ತದೆ. ಇಲ್ಲಿನ ಜನರು ಪರಸ್ಪರ ಸಂಬಂಧ ಹೊಂದಿರುತ್ತಾರೆ. ಸ್ಥಳೀಯವಾಗಿ ವಾಸಿಸುವ ಜನರಿಗೆ ಹಲವಾರು ರೀತಿಯಲ್ಲಿ ಅಗತ್ಯ ಸಹಕಾರ ಮಾಡುತ್ತಾರೆ. ನೆರೆಹೊರೆಯ ಪಾತ್ರ ಗ್ರಾಮ ಮತ್ತು ನಗರ ಪ್ರದೇಶಗಳೆರಡರಲ್ಲೂ ಕಂಡು ಬರುತ್ತದೆ. ನೆರೆಹೊರೆಯ ಜನರು ಕಷ್ಟ-ಸುಖ, ಸಂತೋಷ ಸಮಾರಂಭ ಮುಂತಾದವುಗಳನ್ನು ಪರಸ್ಪರ ಹಂಚಿಕೊಂಡು ಒಂದೇ ಕುಟುಂಬದವರಂತೆ ಜೀವಿಸುವರು. ಆಸಕ್ತಿ, ಅಭಿರುಚಿ, ಹಬ್ಬ, ಜಾತ್ರೆ, ವಿವಾಹ, ಧಾರ್ಮಿಕ ಸಮಾರಂಭ

ಮುಂತಾದ ಸಂದರ್ಭಗಳಲ್ಲಿ ಒಬ್ಬರಿಗೊಬ್ಬರು ಸ್ಪಂದಿಸುವರು. ಗ್ರಾಮೀಣ ಪರಿಸರದಲ್ಲಿ ಎಂತಹ ಸಂದರ್ಭದಲ್ಲಿಯೂ ನೆರೆಹೊರೆಯರಿದ್ದಾರೆ ಎಂಬ ಭಾವನೆಯೊಂದಿಗೆ ಜೀವಿಸುವವರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಆದರೆ ನಗರ ಪರಿಸರದಲ್ಲಿ ಇಂತಹ ಭಾವನೆ ಕಡಿಮೆ. ಸಾಮಾನ್ಯವಾಗಿ ನಗರಗಳಲ್ಲಿ ನೆರೆಹೊರೆಯವರನ್ನು ನಮ್ಮವರು ಎಂದು ಗುರುತಿಸುವುದಕ್ಕಿಂತ ವೈಯಕ್ತಿಕವಾಗಿ ಗುರುತಿಸುವುದೇ ಹೆಚ್ಚು.

**ಚಟುವಟಿಕೆ:** ನಿಮ್ಮ ಕುಟುಂಬವನ್ನು ಆಧಾರವಾಗಿಟ್ಟುಕೊಂಡು ನಿಮ್ಮ ಅಜ್ಜಿ, ತಂದೆ, ತಾಯಿ, ಸೋದರಿ/ ಸೋದರ, ಅತ್ತಿಗೆ, ಅತ್ತೆ ಇವರುಗಳು ನಿರ್ವಹಿಸುತ್ತಿದ್ದು ಕಾರ್ಯ ಚಟುವಟಿಕೆಗಳನ್ನು ಪಟ್ಟಿ ಮಾಡಿ.

**ನೀವೇ ಯೋಚಿಸಿ:** ಸಮಾಜೀಕರಣದ ಹಿನ್ನೆಲೆಯಲ್ಲಿ ಬಾಲಕ/ ಬಾಕಿಯಾಗಿ ಶಾಲೆಯಲ್ಲಿ ನೀವು ನಿರ್ವಹಿಸುವ ಪಾತ್ರಗಳ ಕಾರ್ಯಕ್ಷಮತೆಯನ್ನು ಯೋಚಿಸಿ.

**ಚಟುವಟಿಕೆ:** ನಿಮ್ಮ ಪಕ್ಕದ ಮನೆಯವರೊಂದಿಗೆ ನಿಮ್ಮ ಮನೆಯ ಸಂಬಂಧವನ್ನು ವಿಶ್ಲೇಷಿಸಿ

## ಲಿಂಗ ಹಾಗೂ ಸಾಮಾಜೀಕರಣ

ಈಗಾಗಲೇ ತಿಳಿಸಿದಂತೆ ಸಾಮಾಜೀಕರಣವು ಪ್ರತಿ ಮಾನವ ಜೀವಿಗೂ ಅತ್ಯವಶ್ಯವಾದುದು. ಸಾಮಾಜೀಕರಣದ ಪ್ರಕ್ರಿಯೆಯು ಎಲ್ಲಾ ಕುಟುಂಬದಲ್ಲಿ ಒಂದೇ ತೆರನಾಗಿ ನಡೆಯುವುದಿಲ್ಲ. ಹೆತ್ತವರ, ಆಚಾರ-ವಿಚಾರಗಳು, ಶೈಕ್ಷಣಿಕ ಮಟ್ಟ, ಆಸೆ-ಆಕಾಂಕ್ಷೆ, ಅಭಿರುಚಿ, ಆದ್ಯತೆಗಳು ಇತ್ಯಾದಿ ಸಾಮಾಜೀಕರಣದ ಪ್ರಕ್ರಿಯೆಯನ್ನು ಪ್ರಭಾವಿಸುತ್ತವೆ. ಇದರಿಂದ ಸಾಮಾಜೀಕರಣದ ಪ್ರಕ್ರಿಯೆಯಲ್ಲಿ ಅರಿತೋ ಅಥವಾ ಅರಿಯದೆಯೊ ಮೌಲ್ಯಗಳನ್ನು ಆಚಾರ-ವಿಚಾರಗಳನ್ನು ಭಿನ್ನ-ಭಿನ್ನ ರೀತಿಯಲ್ಲಿ ತಮ್ಮ ಮಕ್ಕಳಿಗೆ ತಿಳಿಸುತ್ತಾ ಇರುತ್ತಾರೆ. ಉದಾಹರಣೆಗೆ ಮಗ ಆಟವಾಡಿ ಮನೆಗೆ ವಿಳಂಬವಾಗಿ ಬಂದರೆ ಗದರಿಸುವ ರೀತಿಗೂ, ಮಗಳೂ ವಿಳಂಬದಿಂದ ಮನೆಗೆ ಬಂದರೆ ಗದರಿಸುವ ರೀತಿಗೂ ವ್ಯತ್ಯಾಸವನ್ನು ಕಾಣಬಹುದು. ಸಾಮಾನ್ಯವಾಗಿ ಮಗನನ್ನು 'ಬಂದಿಯಾ ಮಗನೆ' ಅಂದರೆ ಮಗಳಿಗೆ 'ಇಷ್ಟೇಕೆ ತಡ ಮಾಡಿದೆ ಕತ್ತಲಾಗುವ ಮುಂಚೆನೆ ಮನೆ ಸೇರಬೇಕು' ಎನ್ನುತ್ತಿರುತ್ತಾರೆ. ವಿಶೇಷವಾಗಿ ಭಾರತದಲ್ಲಿ ಅಡುಗೆಗೆ ಮತ್ತು ಕುಟುಂಬದ ಸೇವೆಗಳಿಗೆ ಮಗಳು ಸಹಾಯ ಮಾಡಲು ಅಪೇಕ್ಷಿಸುತ್ತಾರೆ. ಆದರೆ ಮಗನಿಂದ ಇದನು ನಿರೀಕ್ಷಿಸುವುದಿಲ್ಲ. ಅದೇ ರೀತಿ ಹೆಣ್ಣು ಮಗುವಿಗೆ ಆಟವಾಡಲು ಗೊಂಬೆಗಳನ್ನು, ಮಗನಿಗೆ 'ಕ್ರಿಕೆಟ್ ಬ್ಯಾಟನ್ನು' ನೀಡುತ್ತಾರೆ. ಹೀಗೆ ಭಿನ್ನವಾಗಿ ಲಿಂಗಾಧಾರಿತ ಸಾಮಾಜೀಕರಣದ ಪ್ರಕ್ರಿಯೆ ಸಾಮಾನ್ಯವಾಗಿ ನಡೆಯುತ್ತಿರುತ್ತದೆ. ಇದನ್ನು ವ್ಯತ್ಯಾಸ ತೋರುವ ಸಮಾಜೀಕರಣ ಎನ್ನುತ್ತೇವೆ.

ಇಂದಿನ ಆಧುನಿಕ ಸಂಕೀರ್ಣ ಸಮಾಜದಲ್ಲಿ ಮಹಿಳೆಯರ ಸ್ಥಾನಮಾನಗಳು ಗಣನೀಯವಾಗಿ ಬದಲಾವಣೆಯಾಗುತ್ತಿವೆ. ಇವು ಕಾಲಕಾಲಕ್ಕೆ ದೇಶದಿಂದ ದೇಶಕ್ಕೆ ಬದಲಾಗಿವೆ. ಭಾರತದಲ್ಲಿ ರಾಷ್ಟ್ರೀಯ ಮತ್ತು ಪ್ರಜಾಸತ್ತಾತ್ಮಕ ಪ್ರಜ್ಞೆ, ಹೊಸ ಅರ್ಥವ್ಯವಸ್ಥೆ,

ಆಧುನಿಕ ಶಿಕ್ಷಣ ಮಹಿಳೆಯರನ್ನು ಪರಾಧೀನತೆಯಿಂದ ಬಿಡುಗಡೆಗೊಳಿಸಿ ಹೊಸ ರೂಪ ನೀಡಿತು. ಮೊದಲು ಪುರುಷರು ಮಾತ್ರ ಪಡೆಯಬಹುದಾಗಿದ್ದ ಕೆಲವು ಹಕ್ಕುಗಳನ್ನು ಸ್ತ್ರೀಯರು ಇದೀಗ ಪಡೆಯಲಾರಂಭಿಸಿದ್ದಾರೆ. ಗಣಿ ಕೆಲಸ, ಉಕ್ಕಿನ ಕಾರ್ಖಾನೆಗಳಲ್ಲಿನ ಕೆಲಸ, ಸುರಂಗ ತೋಡುವ ಕೆಲಸ, ಸಾಗರದಾಳಗಳಿಂದ ಸಂಪನ್ಮೂಲಗಳನ್ನು ತೆಗೆಯುವ ಕೆಲಸ ಮುಂತಾದ ಕಾರ್ಯಕ್ಷೇತ್ರಗಳಲ್ಲಿಯೂ ಸ್ತ್ರೀಯರು ಇತ್ತೀಚೆಗೆ ಅವಕಾಶಗಳನ್ನು ಪಡೆಯುತ್ತಿದ್ದಾರೆ. ವೈದ್ಯಕೀಯ ವೃತ್ತಿ, ವಕೀಲ ವೃತ್ತಿ, ವಿಶ್ವವಿದ್ಯಾನಿಲಯ ಮಟ್ಟದ ಸಂಶೋಧನೆ, ಕಾರ್ಖಾನೆಯ ಕಾರ್ಯ, ಸೈನಿಕಸೇವೆ, ಯುದ್ಧೋಪಕರಣಗಳ ಉತ್ಪಾದನಾ ಕಾರ್ಯಗಳಲ್ಲಿ ಮಹಿಳೆಯರು ಭಾಗವಹಿಸುತ್ತಿದ್ದಾರೆ. ಈಗಾಗಲೇ ಈ ದಿಕ್ಕಿನಲ್ಲಿ ಸಾಮಾಜೀಕರಣದ ಪ್ರಕ್ರಿಯೆ ನಡೆಯುತ್ತಿರುವುದು ಸಮಾನತೆ ಮತ್ತು ಸಮಾನ ಅವಕಾಶದ ದೃಷ್ಟಿಯಿಂದ ಪ್ರಮುಖವಾಗಿದೆ. ಅದರಲ್ಲಿಯೂ ಸ್ವಾತಂತ್ರ್ಯಾನಂತರ ಭಾರತದಲ್ಲಿ ಕಂಡು ಬಂದ ಸಮಾನತೆಯ ತತ್ವದ ಅನುಷ್ಠಾನ, ಹೆಣ್ಣು ಮಕ್ಕಳ ಶಿಕ್ಷಣಕ್ಕಾಗಿ ಸರ್ಕಾರ ಕೈಗೊಂಡ ವಿಶೇಷ ಕಾರ್ಯಕ್ರಮಗಳು, ಆರ್ಥಿಕ ಪ್ರಗತಿ ಹಾಗೂ ನಗರ ಪ್ರದೇಶಗಳ ಅಭಿವೃದ್ಧಿ, ಬದಲಾದ ಸಾಮಾಜಿಕ ಧೋರಣೆಗಳು, ಸಾಮಾಜೀಕರಣದಲ್ಲಿ ಲಿಂಗ ಸಮಾನತೆಯನ್ನು ತರುವಲ್ಲಿ ಪ್ರಮುಖ ಪಾತ್ರ ವಹಿಸಿವೆ.

**ಚಟುವಟಿಕೆ:** ವಿಶೇಷ ಸಾಧನೆಗಳನ್ನು ಮಾಡಿರುವ ಮಹಿಳೆಯರ ಬಗ್ಗೆ ಮಾಹಿತಿ ಸಂಗ್ರಹಿಸಿ.

## ಅಭ್ಯಾಸಗಳು

### I. ಖಾಲಿ ಬಿಟ್ಟಿರುವ ಜಾಗಗಳನ್ನು ಸೂಕ್ತ ಪದಗಳಿಂದ ತುಂಬಿರಿ.

1. ಮಾನವ ಸಾಮಾಜಿಕ ವ್ಯಕ್ತಿಯಾಗುವ ಪ್ರಕ್ರಿಯೆಯನ್ನು _______ ಎನ್ನುತ್ತೇವೆ.
2. ತಾಯಿಯೇ ಮಗುವಿನ ಮೊದಲ _______ .
3. ಸಾಮಾಜೀಕರಣದ ಪ್ರಮುಖ ನಿಯೋಗಿ _______ .
4. ರೇಡಿಯೋ ಸಾಮಾಜೀಕರಣದ _______ ನಿಯೋಗಿ.

### II. ಈ ಕೆಳಗಿನ ಪ್ರಶ್ನೆಗಳಿಗೆ ಚರ್ಚಿಸಿ ಉತ್ತರ ಬರೆಯಿರಿ.

1. ಸಾಮಾಜೀಕರಣದಲ್ಲಿ ಶಾಲೆಯ ಪಾತ್ರವನ್ನು ವಿವರಿಸಿ.
2. ಕುಟುಂಬದ ಸದಸ್ಯರ ಜೊತೆ ಮಗು ಕಲಿಯುವ ಮೌಲ್ಯಗಳು ಯಾವುವು?
3. ಸಾಮಾಜೀಕರಣ ಪ್ರಕ್ರಿಯೆಯ ಮಹತ್ವವನ್ನು ವಿವರಿಸಿ.
4. ಸಾಮಾಜೀಕರಣ ಪ್ರಕ್ರಿಯೆಯಲ್ಲಿ ಸಮೂಹ ಮಾಧ್ಯಮದ ಪಾತ್ರವನ್ನು ವಿವರಿಸಿ.
5. ಸಾಮಾಜೀಕರಣ ಪ್ರಕ್ರಿಯೆಯಲ್ಲಿ ನೆರೆಹೊರೆಯ ಪಾತ್ರವನ್ನು ವಿವರಿಸಿ.

6. ಸಾಮಾಜೀಕರಣ ಎಂದರೇನು?

## III. ಚಟುವಟಿಕೆ:

1. ಸಾಮಾಜೀಕರಣದ ಪಾತ್ರ ಕುರಿತು ಪ್ರಬಂಧ ಅಥವಾ ಚರ್ಚಾಸ್ಪರ್ಧೆಗಳನ್ನು ಏರ್ಪಡಿಸುವುದು.
2. ಮಾಧ್ಯಮಗಳಲ್ಲಿ ಸಾಮಾಜೀಕರಣ ಕುರಿತು ಬರುವ ಲೇಖನ ಸಾಕ್ಷ್ಯಚಿತ್ರಗಳನ್ನು ಸಂಗ್ರಹಿಸಿ ವಿವರಿಸಿ.

## IV. ನಿಯೋಜಿತ ಕಾರ್ಯ:

1. ಕುಟುಂಬ, ಶಾಲೆ, ಸಮೂಹ ಮಾಧ್ಯಮದ ಸಾಮಾಜೀಕರಣ ಪ್ರಕ್ರಿಯೆಯ ಚಿತ್ರಗಳನ್ನು ಬರೆಯಲು ತಿಳಿಸುವುದು.

## ಅಧ್ಯಾಯ- 3 ಸಾಮಾಜಿಕ ಬದಲಾವಣೆ

**ಈ ಅಧ್ಯಾಯದಲ್ಲಿ ಕೆಳಗಿನ ಅಂಶಗಳನ್ನು ತಿಳಿಯುತ್ತೇವೆ.**

1. ಸಾಮಾಜಿಕ ಬದಲಾವಣೆಯ ಅರ್ಥ
2. ಸಂಘರ್ಷ
3. ಹೊಂದಾಣಿಕೆ
4. ಸಹಕಾರ
5. ಸಹಜೀವನ
6. ಸ್ಪರ್ಧೆ

### ಸಾಮಾಜಿಕ ಬದಲಾವಣೆ ಅರ್ಥ:

ಬದಲಾವಣೆ ಪ್ರಕೃತಿಯ ನಿಯಮ. ಮಾನವ ಸಮಾಜದ ವಿಕಾಸವಾಗಿರುವುದೇ ಕಾಲಾನಂತರದಲ್ಲಿ ಉಂಟಾದ ಜೈವಿಕ ಬದಲಾವಣೆಗಳಿಂದ. ಸಾಮಾಜಿಕ ಬದಲಾವಣೆ ಎನ್ನುವುದು ಮಾನವ ನಡವಳಿಕೆಗಳಲ್ಲಿ, ಸಾಂಸ್ಕೃತಿಕ ಮೌಲ್ಯಗಳಲ್ಲಿ, ಸಾಮಾಜಿಕ ನೀತಿ-ನಿಯಮಗಳಲ್ಲಿ ಉಂಟಾಗಿರುವ 'ಮಹತ್ವದ' ಮಾರ್ಪಾಡುಗಳನ್ನು ಅವಲಂಬಿಸುತ್ತದೆ. ಹಾಗೆಯೇ ಸಾಮಾಜಿಕ ಪ್ರಕ್ರಿಯೆಗಳ ರೂಪಾವಳಿಗಳನ್ನು ಮತ್ತು ಸಾಮಾಜಿಕ ಸಾಂಸ್ಕೃತಿಕ ವಿಕಾಸವನ್ನು ಸೂಚಿಸುತ್ತದೆ. ಸಾಮಾಜಿಕ ಬದಲಾವಣೆಯು ಸಾಮಾಜಿಕ- ಆರ್ಥಿಕ ರಚನೆಯಲ್ಲಿನ ಬದಲಾವಣೆಗಳನ್ನು ವಿವರಿಸುತ್ತದೆ. ಬದಲಾವಣೆಯ ವೇಗವನ್ನು ಶೈಕ್ಷಣಿಕ, ಆರ್ಥಿಕ, ವೈಜ್ಞಾನಿಕ ಅಥವಾ ತಾಂತ್ರಿಕ ಅವಿಷ್ಕಾರಗಳು ಹೆಚ್ಚಿಸುತ್ತವೆ. ಅಂದರೆ ಮಾನವನ ಚಲನ ಸ್ಥಿತಿಗೆ ಸಾಮಾಜಿಕ ಬದಲಾವಣೆಯೇ ಪ್ರಮುಖ ಕಾರಣ ಎಂದು ಹೇಳಬಹುದು.

ಬದಲಾವಣೆ ಎನ್ನುವುದು ಪ್ರಮುಖವಾಗಿ ಎರಡು ಮೂಲಗಳಿಂದ ನಡೆಯುತ್ತದೆ. ಒಂದು, ಪ್ರಾಕೃತಿಕವಾದ ಕಾರಣಗಳು, ಪ್ರಕೃತಿ ವಿಕೋಪಗಳು, ಭೂಕಂಪಗಳು, ಪ್ರವಾಹಗಳು, ಇತ್ಯಾದಿಗಳಿಂದ ಸಮಾಜದ ಬದುಕಿನಲ್ಲಿ ಅನಿವಾರ್ಯ ಬದಲಾವಣೆ ಉಂಟಾಗುತ್ತದೆ. ಪ್ರಕೃತಿಗೆ ಹೊಂದಿಕೊಳ್ಳುವಂತೆ ಈ ಬದಲಾವಣೆಗಳು ಸಂಭವಿಸುತ್ತವೆ. ಉದಾಹರಣೆಗೆ ಇತ್ತೀಚೆಗೆ ಜಾಗತಿಕ ತಾಪಮಾನದ ಹೆಚ್ಚಳದಿಂದ ಉಂಟಾದ ಅನೇಕ ಪ್ರಾಕೃತಿಕ ಬದಲಾವಣೆಗಳನ್ನು ಗಮನಿಸಬಹುದು.

ಮತ್ತೊಂದು, ಮಾನವನ ಚಲನಶೀಲತೆ ಮತ್ತು ಕ್ರೀಯಾಶೀಲತೆಯಿಂದ ಹೊಸ ಹೊಸ ಅವಿಷ್ಕಾರಗಳ ಮೂಲಕ ಉಂಟಾಗುವ ಬದಲಾವಣೆಗಳು. ಉದಾಹರಣೆಗೆ ಗುಲಾಮಗಿರಿಯ, ಜೀತ ಶೋಷಣೆಗಳ ವಿರುದ್ಧ ಚಳವಳಿಗಳ ಮೂಲಕ ಸ್ವಾತಂತ್ರ್ಯವನ್ನು ಪಡೆಯಲಾಯಿತು. ನಂತರ ಮಹಿಳಾ ಹಕ್ಕು, ದಲಿತರ ಹಕ್ಕು ಮತ್ತು ನಾಗರಿಕ ಹಕ್ಕು ರಕ್ಷಣೆ ಮಾಡಿಕೊಳ್ಳಲು ಹೊಸ ಕಾನೂನುಗಳನ್ನು ಮತ್ತು ಆಡಳಿತ ವ್ಯವಸ್ಥೆಗಳನ್ನು ರೂಪಿಸಿಕೊಳ್ಳಲಾಯಿತು. ಇದು ಸಮಾಜದ ಸಂರಚನೆ ಮತ್ತು ಕಾರ್ಯಗಳ ಸಂಬಂಧಗಳಲ್ಲಿ ಹಲವು ಬದಲಾವಣೆಗಳನ್ನು ತಂದಿದೆ. ಇಂತಹ ಬದಲಾವಣೆಗಳೆನ್ನೇ ಸಾಮಾಜಿಕ ಬದಲಾವಣೆ ಎಂದು ಕರೆಯುವುದು.

**ಇದನ್ನು ಹೀಗೆ ವ್ಯಾಖ್ಯಾನ ಮಾಡಬಹುದು:** ಸಾಮಾಜಿಕ ಬದಲಾವಣೆಯೆಂಬುದು ಜನರ ಜೀವನ ವಿಧಾನಗಳಲ್ಲಿ ಉಂಟಾದ ಪರಿವರ್ತನೆ.

ಮೆಕ್ಕೈವರ್ ಎನ್ನುವ ಸಮಾಜಶಾಸ್ತ್ರಜ್ಞರ ಪ್ರಕಾರ 'ಸಾಮಾಜಿಕ ಸಂಬಂಧಗಳಲ್ಲಾಗುವ ಬದಲಾವಣೆಯೇ ಸಾಮಾಜಿಕ ಬದಲಾವಣೆ.'

**ಸಾಮಾಜಿಕ ಬದಲಾವಣೆಯ ಲಕ್ಷಣಗಳು**

1. ಸಾಮಾಜಿಕ ಬದಲಾವಣೆಯು ನಿರಂತರವಾದದ್ದು
2. ಸಾಮಾಜಿಕ ಬದಲಾವಣೆಯು ಸಾರ್ವತ್ರಿಕವಾದದ್ದು
3. ಸಾಮಾಜಿಕ ಬದಲಾವಣೆಯ ರೂಪ ಮತ್ತು ಗತಿ ಒಂದೇ ರೀತಿಯಲ್ಲಿರುವುದಿಲ್ಲ.
4. ಸಾಮಾಜಿಕ ಪ್ರಕ್ರಿಯೆಗಳ ಸರಪಳಿಗಳು ಸಾಮಾಜಿಕ ಬದಲಾವಣೆಗಳನ್ನು ಸೃಷ್ಟಿ ಮಾಡುತ್ತವೆ.

## ಸಾಮಾಜಿಕ ಬದಲಾವಣೆ ಮತ್ತು ಸಾಮಾಜಿಕ ಪ್ರಕ್ರಿಯೆ:

ಸಾಮಾಜಿಕ ಪ್ರಕ್ರಿಯೆಯ ಮೂಲಕ ಸಾಮಾಜಿಕ ಬದಲಾವಣೆ ಉಂಟಾಗುತ್ತದೆ. ಸಮಾಜಶಾಸ್ತ್ರಜ್ಞರಾಗಿರುವ ಪಾರ್ಕ್ ಮತ್ತು ಬರ್ಗೆಸ್ ಅವರು ಪ್ರಮುಖ ನಾಲ್ಕು ವಿಧಗಳ ಮೂಲಕ ಸಾಮಾಜಿಕ ಪ್ರಕ್ರಿಯೆಗಳನ್ನು ವಿವರಿಸುತ್ತಾರೆ. ಆದರೆ ಸಾಮಾನ್ಯವಾಗಿ ಚರ್ಚೆಗೆ ಒಳಪಡುವ ಸಾಮಾಜಿಕ ಪ್ರಕ್ರಿಯೆಗಳ ಪ್ರಕಾರಗಳೆಂದರೆ:

1. ಸಂಘರ್ಷ
2. ಹೊಂದಾಣಿಕೆ
3. ಸಹಕಾರ

4. ಸಹಜೀವನ ಮತ್ತು

5. ಸ್ಪರ್ಧೆ. ಇಲ್ಲಿ ಸ್ಪರ್ಧೆಯೂ ಸಾಮಾಜಿಕ ಪ್ರಕ್ರಿಯೆಯೆಂದು ಹೆಸರಿಸಲಾಗಿದೆ.

### *1. ಸಂಘರ್ಷ:*

ಸಂಘರ್ಷವು ಸಾಮಾಜಿಕ ಬದಲಾವಣೆಗಳಲ್ಲಿ ಅತ್ಯಂತ ಮುಖ್ಯವಾದ ಹಾಗೂ ತೀವ್ರ ಸ್ವರೂಪದ ಸಾಮಾಜಿಕ ಪ್ರಕ್ರಿಯೆ. ಒಂದು ತಂಡ ಅಥವಾ ಗುಂಪು ತಮ್ಮ ಉದ್ದೇಶಗಳನ್ನು ಸಾಧಿಸಲು ನಡೆಸುವ ತಿಕ್ಕಾಟಗಳೆಲ್ಲವೂ ಸಾಮಾಜಿಕ ಸಂಘರ್ಷಗಳಾಗಿವೆ. ಉದಾಹರಣೆಗೆ ಕಬಡ್ಡಿ ಆಟವನ್ನು ಆಡುವಾಗ ಎರಡೂ ತಂಡಗಳೂ ಅಂಕವನ್ನು ಪಡೆಯಲು ಪ್ರಯತ್ನ ಮಾಡಿ ಸೆಣಸಾಡುತ್ತಿರುತ್ತವೆ. ಯಾವ ತಂಡ ಯುಕ್ತಿ ಮತ್ತು ಶಕ್ತಿಯಿಂದ ಆಡುತ್ತದೆಯೋ, ಆ ತಂಡ ಗೆಲ್ಲುತ್ತದೆ. ಇದೇ ರೀತಿ ಸಾಮಾಜಿಕ ವ್ಯವಸ್ಥೆಯಲ್ಲಿ ವ್ಯಕ್ತಿಗಳಿಂದ ಅಥವಾ ಜನರ ಗುಂಪುಗಳಿಂದ ತಮ್ಮ ಹಕ್ಕುಗಳಿಗೆ, ತಮಗೆ ಅಗತ್ಯವಾದ ಸೌಲಭ್ಯಗಳು ದೊರಕದೇ ಇದ್ದಾಗ, ಸ್ವಾತಂತ್ರ್ಯ ಮತ್ತು ಸಮಾನತೆ ದೊರಕದೇ ಇದ್ದಾಗ, ವೈಯಕ್ತಿಕವಾಗಿ ಮತ್ತು ಚಳುವಳಿಯ ಮಾದರಿಯಲ್ಲಿ ಸಂಘರ್ಷ ನಡೆಸಿ ಅದನ್ನು ಪಡೆದುಕೊಳ್ಳಲು ಪ್ರಯತ್ನಗಳು ನಡೆಯುತ್ತವೆ. ಇದಕ್ಕೆ ಅತ್ಯಂತ ಸೂಕ್ತವಾದ ಉದಾಹರಣೆಯೆಂದರೆ, ಮಹಿಳೆಯರ, ಮಕ್ಕಳ ಮತ್ತು ದಲಿತರ ಹಕ್ಕುಗಳನ್ನು ಕಿತ್ತುಕೊಂಡಾಗ, ಇಡೀ ಸಮಾಜದಲ್ಲಿ ಅವರ ಹಕ್ಕುಗಳನ್ನು ಕಿತ್ತುಕೊಳ್ಳಬಾರದೆಂದು ಚರ್ಚೆ ಆರಂಭವಾಗುತ್ತದೆ. ಈ ಚರ್ಚೆ ಹಕ್ಕುಗಳನ್ನು ಕಸಿದುಕೊಂಡವರು ಮತ್ತು ಕಳೆದು ಕೊಂಡವರು ಎಂಬುವರ ನಡುವಿನ ಚರ್ಚೆ ಮಾತ್ರ ಆಗಿರುವುದಿಲ್ಲ. ಇದು ಒಂದು ಬಗೆಯಲ್ಲಿ ಹಕ್ಕುಗಳನ್ನು ಪ್ರತಿಪಾದಿಸುವ ಸಂಘರ್ಷ. ಇದು ಸಾಮಾಜಿಕ ಬದಲಾವಣೆಯನ್ನು ತರುವ ಮೂಲಾಂಶ.

### *2. ಹೊಂದಾಣಿಕೆ:*

ಸಾಮಾಜಿಕ ಬದಲಾವಣೆಗೆ ಸಂಘರ್ಷ ಎಷ್ಟು ಮುಖ್ಯವೋ, ಅಷ್ಟೇ ಮುಖ್ಯವಾದ ಸಾಮಾಜಿಕ ಪ್ರಕ್ರಿಯೆಯೆಂದರೆ ಹೊಂದಾಣಿಕೆ. ಆಯಾ ಸಮಾಜದಲ್ಲಿರುವ ವ್ಯಕ್ತಿಗಳು ಮತ್ತು ಗುಂಪುಗಳು ತಮ್ಮ ತಮ್ಮಲ್ಲಿರುವ ವಿಚಾರಗಳ ಆಧಾರದಲ್ಲಿ ಕೆಲವು ನಿಲುವುಗಳಿಗೆ ಬಂದಿರುತ್ತಾರೆ. ಈ ನಿಲುವುಗಳು ಅನೇಕ ಬಗೆಯ ತಿಕ್ಕಾಟಗಳನ್ನು ಉಂಟುಮಾಡುತ್ತಿರುತ್ತವೆ. ಈ ತಿಕ್ಕಾಟಗಳನ್ನು ಹೊಂದಾಣಿಕೆಯ ಮೂಲಕ ಬಗೆಹರಿಸಿಕೊಳ್ಳಲಾಗುತ್ತದೆ. ಹೊಂದಾಣಿಕೆಯಾಗದೇ ಬರೀ ಸಂಘರ್ಷಗಳೇ ಮುಂದುವರೆದರೆ ಆ ಸಮಾಜದಲ್ಲಿ ಅರಾಜಕತೆ ಮತ್ತು ಗುಂಪು ಘರ್ಷಣೆ ಹೆಚ್ಚುವ ಸಾಧ್ಯತೆಯೂ ಇರುತ್ತದೆ. ಆದ್ದರಿಂದ ಪರಸ್ಪರ ಮಾತುಕತೆಯ ಮೂಲಕ ಒಪ್ಪಂದಕ್ಕೆ ಬರಲಾಗುತ್ತದೆ. ‘ಇದನ್ನೇ ನಾವು ಹೊಂದಾಣಿಕೆ’ ಎಂದು ಕರೆಯುತ್ತೇವೆ. ಈ ಹೊಂದಾಣಿಕೆಯು ಕುಟುಂಬದ ಒಳಗೆ, ಹೊರಗೆ, ಸಮಾಜದಲ್ಲಿ, ಚಳುವಳಿಗಳ ನಡುವೆ, ಸಿದ್ಧಾಂತದ ಒಳಗೆ ಅನೇಕ ಬಗೆಯ ಬದಲಾವಣೆಗೆ

ಕಾರಣವಾಗುವುದನ್ನು ನಾವು ಕಾಣಬಹುದು. ಇದು ಮತ್ತೊಬ್ಬರ ಇರುವಿಕೆಯನ್ನು ಗೌರವಿಸುವ ಕ್ರಮವೂ ಹೌದು. ಇದರಿಂದ ಸಮಾಜದಲ್ಲಿ ಶಾಂತಿ, ಸಹಬಾಳ್ವೆ ನಿರ್ಮಾಣವಾಗುತ್ತವೆ.

### *3. ಸಹಕಾರ:*

ಸಹಕಾರವು ಮಾನವ ತನಗೆ ಬೇಕಾಗುವ ಅಗತ್ಯಗಳನ್ನು ಪಡೆದುಕೊಳ್ಳಲು ಬಳಸುವ ಒಂದು ಮಾರ್ಗ. ಸಮಾಜದಲ್ಲಿ ಬಹುತೇಕ ಸಾಮಾಜಿಕ ಸಂಬಂಧಗಳು ಕೊಡು ಕೊಳ್ಳುವಿಕೆಯ ಮೂಲಕ ನಡೆಯುತ್ತಿರುತ್ತವೆ. ಇದನ್ನು ಸಹಕಾರ ಮನೋಭಾವ ಎಂದು ಕರೆಯುತ್ತೇವೆ. ಸಹಕಾರದಲ್ಲಿ ಎರಡು ವಿಧ. ಒಂದು- ಪ್ರತ್ಯಕ್ಷ ಸಹಕಾರ ಎರಡು- ಪರೋಕ್ಷ ಸಹಕಾರ. ಇದನ್ನು ಹೀಗೆ ವಿವರಿಸಿಕೊಳ್ಳಬಹುದು. ಒಂದು ಮಗು ಶಾಲೆಯಲ್ಲಿ ಕಲಿಯಬೇಕಾದರೆ, ಆ ಮಗು ಕಲಿಯುತ್ತಿರುವಾಗ ಬೋಧಿಸುವ ಶಿಕ್ಷಕರು ಆ ಮಗುವಿನ ಕಲಿಕೆಗೆ ಪ್ರತ್ಯಕ್ಷವಾಗಿ ಸಹಕರಿಸುತ್ತಿರುತ್ತಾರೆ. ಅದೇ ಶಾಲಾ ಆವರಣದಲ್ಲಿ ಆಡಳಿತ ನೋಡಿಕೊಳ್ಳುವ, ಮುಖ್ಯ ಶಿಕ್ಷಕರು, ಬಿಸಿಯೂಟ ಮಾಡುವ ಮಹಿಳೆಯರು, ಶಾಲೆಯನ್ನು ಸ್ವಚ್ಛಗೊಳಿಸುವ ಸಿಬ್ಬಂದಿ, ಮಕ್ಕಳಿಗೆ ಕುಡಿಯಲು ನೀರು ತರುವ ತಾಯಂದಿರು, ಮಕ್ಕಳ ಕಲಿಕೆಯಲ್ಲಿ ಪರೋಕ್ಷವಾಗಿ ಸಹಕರಿಸುತ್ತಿರುತ್ತಾರೆ. ಹೀಗೆ ಸಹಕಾರಗಳ ಮೂಲಕ ನಡೆಯುವ ಶಾಲೆಯು ಕಾಲಾನಂತರದಲ್ಲಿ ಆ ಶಾಲೆ ನೆಲೆಗೊಂಡಿರುವ ಪರಿಸರದ ಉತ್ತಮ ಕಲಿಕೆಗೆ ಬೆಂಬಲವಾಗಿ ನಿಲ್ಲುವ ಮೂಲಕ ಆ ಹಳ್ಳಿಯ ಅಥವಾ ಆ ಪ್ರದೇಶದ ಬದಲಾವಣೆಗೆ ಕಾರಣವಾಗುತ್ತದೆ. ಶಿಕ್ಷಣದ ಮೂಲ ಕಲಿಕೆಯು ಮುಂದೆ ನಮ್ಮೊಳಗೆ ಸಹಜೀವನಕ್ಕೆ ಮಾರ್ಗದರ್ಶನ ನೀಡುತ್ತದೆ.

**ಚಟುವಟಿಕೆ:** ಸಹಕಾರ, ಸಹಜೀವನ ಮಹತ್ವ ಕುರಿತು ಕುಟುಂಬದ ಸದಸ್ಯರಿಂದ ನೆರೆಹೊರೆಯವರಿಂದ ಮಾಹಿತಿ ಪಡೆಯಿರಿ.

### *4. ಸಹಜೀವನ:*

ಸಹಜೀವನ, ಮಾನವ ಸಮಾಜದ ಉಳಿವಿಗೆ ಮತ್ತು ಬೆಳವಣಿಗೆಗೆ ಅತ್ಯಂತ ಮುಖ್ಯವಾದ ಒಂದು ಅಂಶ. ಸಹಜೀವನ ನಮ್ಮ ಸಂವಿಧಾನದ ಆಶಯವಾದ ಸರ್ವಧರ್ಮ, ಸಮಾಜವಾದಿ, ಪ್ರಜಾಸತ್ತಾತ್ಮಕ ಆಶಯಗಳನ್ನು ಹೊಂದಿದೆ. ಇದರ ಅರ್ಥ ಎಲ್ಲರೂ ಸಮಾನ ಅವಕಾಶದಿಂದ, ಸ್ವಾತಂತ್ರ್ಯ, ಸಾಮಾಜಿಕ, ಆರ್ಥಿಕ, ರಾಜಕೀಯ ನ್ಯಾಯಗಳಿಂದ ಒಟ್ಟಿಗೆ ಬದುಕುವುದು. ಇದನ್ನು ವಿವರಿಸುವುದಾದರೆ, ಸಂವಿಧಾನದ ಕಲಂ 14, ಕಾನೂನಿನ ಮುಂದೆ ಎಲ್ಲರೂ ಸಮಾನರು ಎಂಬುದನ್ನು ಸೂಚಿಸುತ್ತದೆ. ಇದು ಜಾತಿ, ಧರ್ಮ, ಜನಾಂಗ, ಲಿಂಗ, ಪ್ರದೇಶ ಮತ್ತು ಇತ್ಯಾದಿಗಳ ಸಮಾನತೆಗೆ ಸಂಬಂಧಿಸಿದೆ. ಸಾಮಾಜಿಕ ಆರ್ಥಿಕ ಅಸಮಾನತೆಗಳಿಂದ ಯಾರನ್ನೂ ಕಾಣಬಾರದು ಎಂದು ಹೇಳುತ್ತದೆ. ವಿವಿಧತೆಯಲ್ಲಿ ಏಕತೆಯನ್ನು ಸಾಧಿಸಲು ಸಹಬಾಳ್ವೆ ಅಗತ್ಯವಾಗಿದೆ. ಅಸಂಖ್ಯಾತ ಜಾತಿ, ಸಂಸ್ಕೃತಿ, ಭಾಷೆ, ಆಚಾರ-ವಿಚಾರಗಳನ್ನೊಳಗೊಂಡ ಭಾರತೀಯರೆಲ್ಲರೂ ಜಗತ್ತಿಗೆ ಮಾದರಿಯೆಂಬಂತೆ

ಜೀವಿಸುವುದು ಸಹಬಾಳ್ವೆಯ ಸಾಮಾಜಿಕ ಬದಲಾವಣೆಗೆ ಕಾರಣವಾಗುತ್ತದೆ. ಇದು ಸಂಘರ್ಷರಹಿತ ಶಾಂತಿ ಹಾಗೂ ಅಹಿಂಸಾ ಜೀವನವನ್ನು ಬೆಂಬಲಿಸುತ್ತದೆ. ಆ ಮೂಲಕ ನಾವೆಲ್ಲರೂ ಒಂದೇ ಎನ್ನುವ ಭಾವನೆಯನ್ನು ಹೆಚ್ಚಿಸುತ್ತದೆ.

**ಚಟುವಟಿಕೆ:** ಸ್ಪರ್ಧೆಗಳು ಸಮಾಜದ ಯೋಗಕ್ಷೇಮಕ್ಕೆ ಕೊರತೆಯಾಗದಂತೆ ನಡೆಸಬಹುದಾದ ಸ್ಪರ್ಧೆಗಳನ್ನು ಪಟ್ಟಿ ಮಾಡಿ.

## 5. *ಸ್ಪರ್ಧೆ:*

ಸ್ಪರ್ಧೆ ಮಾನವ ಜೀವಿಯ ವಿಕಾಸದ ಹಾದಿಯಲ್ಲೇ ಪ್ರಾರಂಭವಾಯಿತು. ಡಾರ್ವಿನ್ ತಮ್ಮ ವಿಕಾಸವಾದವನ್ನು ಮಂಡಿಸುವಾಗ ಹೀಗೆ ವಿವರಿಸುತ್ತಾರೆ: "ಜೀವ ವಿಕಾಸವು ಸಂಘರ್ಷ ಮತ್ತು ಸ್ಪರ್ಧೆಯ ನೆಲೆಯಲ್ಲಿ ನಡೆಯುತ್ತಿರುತ್ತದೆ. ಹೀಗೆ ನಡೆಯುವಾಗ ಸ್ಪರ್ಧೆಯು ಹೆಚ್ಚಾದಂತೆ ಪ್ರಬಲವಾಗಿರುವುದು ಉಳಿದುಕೊಳ್ಳುತ್ತದೆ. ದುರ್ಬಲವಾಗಿರುವುದು ಅಳಿಯುತ್ತದೆ." ಪ್ರಾಣಿ, ಪಕ್ಷಿ, ಕ್ರಿಮಿ-ಕೀಟಗಳೂ ಸಹ ಆಹಾರ ಪಡೆಯಲು ಸ್ಪರ್ಧೆ ನಡೆಸುವುದನ್ನು ನಾವು ಕಾಣುತ್ತೇವೆ. ಇಂಥ ಸ್ಪರ್ಧೆಗಳು ಮಾನವ ಸಮಾಜದಲ್ಲಿಯೂ ಇವೆ. ಸಹಜ ಸ್ಪರ್ಧೆಗೆ ಯಾವುದೇ ಗುಂಪುಗಾರಿಕೆ ಮತ್ತು ಪಕ್ಷಪಾತಗಳು ಇರುವುದಿಲ್ಲ. ಆದರೆ ಇತ್ತೀಚಿನ ಕೆಲವು ಸ್ಪರ್ಧೆಗಳು ಅಮಾನವೀಯವಾಗುತ್ತಿರುವುದನ್ನು ನಾವು ಕಾಣುತ್ತೇವೆ. ಇವು ಸಮಾಜದಲ್ಲಿ ಅನೇಕ ಸಂಘರ್ಷಗಳನ್ನು ಉಂಟು ಮಾಡುತ್ತಿವೆ. ನಿಯಮರಹಿತ ಮತ್ತು ನಿಯಮಸಹಿತ ಸ್ಪರ್ಧೆಗಳು ಸಮಾಜದಲ್ಲಿ ಅನೇಕ ಸಕಾರಾತ್ಮಕ ಮತ್ತು ನಕಾರಾತ್ಮಕ ಪರಿಣಾಮಗಳನ್ನು ಉಂಟುಮಾಡುತ್ತಿರುತ್ತವೆ. ಆದರೆ ಇತ್ತೀಚೆಗೆ ಜಾಗತಿಕ ಆರ್ಥಿಕತೆಯು ಸ್ಪರ್ಧೆ ಎನ್ನುವುದನ್ನು ಸಮಾಜದ ಆರೋಗ್ಯಕ್ಕಿಂತಲೂ ಆದಾಯ ಸಂಪಾದನೆಯ ನೆಲೆಯಲ್ಲಿ ಬೆಳೆಸುತ್ತಿದೆ. ಈ ಬೆಳವಣಿಗೆಯು ಜೀವಜಗತ್ತಿನ ಮನೋಧರ್ಮವನ್ನೇ ಬದಲಾಯಿಸುತ್ತದೆ.

## ಅಭ್ಯಾಸಗಳು

**I. ಖಾಲಿ ಬಿಟ್ಟಿರುವ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿರಿ.**

1. ಬದಲಾವಣೆ _______ ನಿಯಮ.
2. ಸಹಕಾರ ಜೀವನಕ್ಕೆ ಶಾಲೆ ಒಂದು _______ ಎನ್ನುತ್ತಾರೆ.
3. ವಿಕಾಸವಾದವನ್ನು ಮಂಡಿಸಿದವರು _______ .

**II. ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.**

1. ಸಾಮಾಜಿಕ ಬದಲಾವಣೆ ಎಂದರೇನು?
2. ಸಹಕಾರ ಎಂದರೇನು?
3. ಸಹಜೀವನ ಮೂಲ ಅಂಶಗಳು ಯಾವುವು?
4. ಸಾಮಾಜಿಕ ಬದಲಾವಣೆಯ ಲಕ್ಷಣಗಳನ್ನು ತಿಳಿಸಿ.
5. ಸಾಮಾಜಿಕ ಬದಲಾವಣೆ ಅಗತ್ಯವೆ?
6. ಸ್ಪರ್ಧೆ ದಿನೇ ದಿನೇ ಹೆಚ್ಚಾಗಲು ಕಾರಣಗಳೇನು?

## III. ಚಟುವಟಿಕೆ

1. ಸಂಘರ್ಷದ ಅನುಕೂಲ-ಅನಾನುಕೂಲಗಳನ್ನು ಕುರಿತು ಸಂವಾದ ನಡೆಸಿ.
2. ಸಹಬಾಳ್ವೆಯ ಮಹತ್ವವನ್ನು ಕುರಿತು, ಪ್ರಬಂಧ ಮತ್ತು ಚರ್ಚಾ ಸ್ಪರ್ಧೆಗಳನ್ನು ಶಾಲೆಗಳಲ್ಲಿ ನಡೆಸಿ.

## IV. ನಿಯೋಜಿತ ಕಾರ್ಯ

1. ಸಾಮಾಜಿಕ ಬದಲಾವಣೆ ಕುರಿತು ಹೆಚ್ಚಿನ ಮಾಹಿತಿ ಸಂಗ್ರಹಿಸಿ.
2. ಶಾಲೆಗೆ ಹತ್ತಿರವಿರುವ ಸಹಕಾರಿ ವ್ಯವಸ್ಥೆಯನ್ನು ಮಕ್ಕಳಿಗೆ ತೋರಿಸಿ.

## ಅಧ್ಯಾಯ- 4 ಸಮುದಾಯ

**ಈ ಅಧ್ಯಾಯದಲ್ಲಿ ಕೆಳಗಿನ ಅಂಶಗಳನ್ನು ತಿಳಿಯುತ್ತೇವೆ.**

1. ಸಮುದಾಯದ ಅರ್ಥ.
2. ಅಲೆಮಾರಿ ಸಮುದಾಯ ಮತ್ತು ಅದರ ಲಕ್ಷಣಗಳು.
3. ಬುಡಕಟ್ಟು ಸಮುದಾಯ ಮತ್ತು ಅದರ ಲಕ್ಷಣಗಳು.
4. ಗ್ರಾಮ ಸಮುದಾಯ ಮತ್ತು ಅದರ ಲಕ್ಷಣಗಳು.
5. ನಗರ ಸಮುದಾಯ ಮತ್ತು ಅದರ ಲಕ್ಷಣಗಳು.

### ಸಮುದಾಯದ ಅರ್ಥ

ಒಂದು ಗುಂಪಿನಲ್ಲಿ ಮೂರಕ್ಕಿಂತ ಹೆಚ್ಚಿನ ಜನರು ವಾಸಮಾಡುತ್ತಾ. ಕೆಲವು ಸಾಮಾನ್ಯ ನೀತಿ- ನಿಯಮ, ಮೌಲ್ಯಗಳು ಮತ್ತು ಗುರುತುಗಳನ್ನು ಹೊಂದಿ, ಒಂದು ನಿಗದಿತ ಭೌಗೋಳಿಕ ಪ್ರದೇಶದಲ್ಲಿ ಬದುಕುವುದನ್ನು ಸಮುದಾಯವೆಂದು ಕರೆಯಲಾಗುತ್ತದೆ. ಹೀಗಾಗಿ ಸಮುದಾಯವನ್ನು ಒಂದು ಸಾಮಾಜಿಕ ಘಟಕ ಎಂದು ಕರೆಯಲಾಗುತ್ತದೆ.

ಎಲ್ಲಾ ಸಮುದಾಯಗಳು ಮಾನವ ಜೀವನಕ್ಕೆ ಬೇಕಾಗುವ ಅಗತ್ಯ ವಸ್ತು ಪದಾರ್ಥಗಳನ್ನು ತಮ್ಮ ತಮ್ಮ ನೆಲೆಯಲ್ಲಿ ಉತ್ಪಾದಿಸಿ ಒದಗಿಸುತ್ತವೆ. ಅಂದರೆ ವಿವಿಧ ಲಕ್ಷಣಗಳು ಮತ್ತು ವೃತ್ತಿ ಅವಲಂಬನೆ, ಆಹಾರ ಉತ್ಪಾದಿಸುವ ಕ್ರಮ, ಆಹಾರದ ಬಳಕೆಯ ಕ್ರಮ, ವಾಸದ ನೆಲೆ, ಆರೋಗ್ಯ, ಶಿಕ್ಷಣ, ಕುಡಿಯುವ ನೀರು ಸೇರಿದಂತೆ ಅಗತ್ಯ ಮೂಲ ಸೌಲಭ್ಯಗಳ ದೊರೆಯುವಿಕೆ, ಇತ್ಯಾದಿ ಸೌಲಭ್ಯಗಳನ್ನು ಸಮುದಾಯಗಳು ಪಡೆದುಕೊಳ್ಳುತ್ತವೆ. ಸಾಮಾಜಿಕ ಜೀವನ, ವೃತ್ತಿ ಲಕ್ಷಣಗಳು, ಸಾಂಸ್ಕೃತಿಕ ಜೀವನ, ನಂಬಿಕೆ, ಆರ್ಥಿಕ ವ್ಯವಸ್ಥೆ, ಜನಸಂಖ್ಯೆಯ ಆಧಾರದಲ್ಲಿ ಸಮುದಾಯಗಳನ್ನು ಪ್ರಮುಖವಾಗಿ ನಾಲ್ಕು ಗುಂಪುಗಳಾಗಿ ವಿಭಾಗಿಸಲಾಗಿದೆ. ಅವೆಂದರೆ- ಅಲೆಮಾರಿ, ಬುಡಕಟ್ಟು, ಗ್ರಾಮ ಮತ್ತು ನಗರ ಸಮುದಾಯ.

### ಅಲೆಮಾರಿ ಸಮುದಾಯ

ಅಲೆಮಾರಿತನವು ಒಂದು ಜೀವನ ವಿಧಾನ ಎಂದು ಎನ್ಸೈಕ್ಲೋಪೀಡಿಯ ಬ್ರಿಟಾನಿಕಾ ಹೇಳುತ್ತದೆ. ಬೇಟೆ ಮತ್ತು ಆಹಾರ ಸಂಗ್ರಹಣೆ, ಪಶುಪಾಲನೆ ಅಥವಾ ವ್ಯಾಪಾರಕ್ಕಾಗಿ ಒಂದೆಡೆ ನೆಲೆಯೂರದೆ ಋತುಮಾನಗಳಿಗೆ ಅನುಗುಣವಾಗಿ ಒಂದು ಪ್ರದೇಶದಿಂದ ಮತ್ತೊಂದು

ಪ್ರದೇಶಕ್ಕೆ ಅಲೆಯುವ ಜನರ ಗುಂಪನ್ನು ಅಲೆಮಾರಿ ಸಮುದಾಯ ಎಂದು ಕರೆಯಲಾಗುತ್ತದೆ. ಈ ಅಲೆದಾಟವು ವಲಸೆ ಪ್ರಕ್ರಿಯೆಗಿಂತ ವಿಭಿನ್ನ. ಅಲೆಮಾರಿ ಎಂಬ ಪದಕ್ಕೆ ಹಿಂದಿಯಲ್ಲಿ ಸಂಚಾರಿ, ತಮಿಳಿನಲ್ಲಿ ಪೊರ್ಕ್ಸನ್, ತುಳುವಿನಲ್ಲಿ ತೆಂಡುಳಿ, ತೆಲುಗಿನಲ್ಲಿ ತಿರುಗುಬೋತು, ಮಲೆಯಾಳಂನಲ್ಲಿ ತೆರಿಂಟಿ, ಲ್ಯಾಟಿನಿನಲ್ಲಿ ನೋಮಾಸ್ (noma), ಇಂಗ್ಲಿಷಿನಲ್ಲಿ ನೊಮ್ಯಾಡ್ (nomad) ಎಂದು ಹೆಸರಿಸಲಾಗುತ್ತಿದೆ. ಜೊತೆಗೆ ಪರದೇಶಿ, ನೆಲೆಯಿಲ್ಲದವರು, ದೇಶ ಸಂಚಾರಿಗಳು, ಪರಸ್ಥಳದವರು, ಹೊರಗಡೆಯವರು, ಉಚಲ್ಯಾ, ಜಿಪ್ಸಿ, ಬೀಡು ಬಿಡುವವರು, ಇತ್ಯಾದಿ ಹೆಸರುಗಳಿಂದಲೂ ಕರೆಯಲಾಗುತ್ತದೆ.

### *ಅಲೆಮಾರಿ ಸಮುದಾಯದ ಲಕ್ಷಣಗಳು*

1. **ಜೀವನ ಅಥವಾ ಬದುಕಿಗಾಗಿ ಅಲೆದಾಟ:** ಪಾರಂಪರಿಕವಾಗಿ ಪ್ರಾಣಿ, ಪಕ್ಷಿಗಳ ಬೇಟೆ, ಪಳಗಿಸುವಿಕೆ ಮತ್ತು ಪ್ರದರ್ಶನ, ಪಶುಪಾಲನೆ, ನಾಟಿವೈದ್ಯ, ಕಲಾ ಪ್ರದರ್ಶನ, ಇತ್ಯಾದಿಗಳ ಮೂಲಕ ಬದುಕಿಗಾಗಿ ಅಲೆದಾಟ ನೆಡೆಸುವುದು. ಉದಾಹರಣೆ: ಕರಡಿ, ಕೋತಿ, ಹಾವು, ನಂದಿಗಳ ಪ್ರದರ್ಶನ, ತೊಗಲು ಗೊಂಬೆಯಾಟ, ದೊಂಬರಾಟ, ಮಾರಮ್ಮ ದೈವ ಇತ್ಯಾದಿಗಳ ಪ್ರದರ್ಶನ, ನಾಟಿವೈದ್ಯ, ಸಣ್ಣಪುಟ್ಟ ವಸ್ತುಗಳ ಮಾರಾಟ ಮತ್ತು ರಿಪೇರಿ ಇವು ಅಲೆಮಾರಿ ಸಮುದಾಯದ ಪ್ರಮುಖ ಲಕ್ಷಣ.

2. **ತಾತ್ಕಾಲಿಕ ವಾಸ:** ಸ್ಥಿರವಾಗಿ ನೆಲೆನಿಲ್ಲದೆ, ಆರ್ಥಿಕ ಭದ್ರತೆ ಮತ್ತು ಅಕ್ಷರ ಜ್ಞಾನದ ಕೊರತೆಯಿಂದ ಗ್ರಾಮಗಳ ಹೊರಗೆ, ಸಾರ್ವಜನಿಕ ಸ್ಥಳಗಳ ಬಯಲು ಜಾಗದಲ್ಲಿ ತಾತ್ಕಾಲಿಕವಾಗಿ ಬಿಡಾರಗಳನ್ನು ಹೂಡಿ ವಾಸಮಾಡುತ್ತಾರೆ.

3. **ಶೂನ್ಯ ಅಥವಾ ಅಲ್ಪ ಬಂಡವಾಳದ ಕಾಯಕ ಜೀವಿಗಳು:** ಈ ಸಮುದಾಯಗಳಿಗೆ ಯಾವುದೇ ಆರ್ಥಿಕ ಭದ್ರತೆಗಳಿಲ್ಲ. ಇವರಲ್ಲಿ ಬಹುತೇಕ ಜನರು ಗುಜರಿ ಆರಿಸುವುದು, ಬಕೆಟ್ ರಿಪೇರಿ ಮಾಡುವುದು, ದಾರ, ಪಿನ್ನು, ಸೂಜಿ, ಜಡಿಬೂಟಿ ಮಾರುವುದು, ಮೀನು ಹಿಡಿಯುವುದು, ಪ್ಲಾಸ್ಟಿಕ್‌ಪೇಪರ್ ಆರಿಸುವುದು, ಕೃಷಿಕೂಲಿ ಇತ್ಯಾದಿ ದುಡಿಮೆ ಮಾಡುತ್ತಾರೆ.

4. **ಸರ್ವಚೇತನವಾದಿಗಳು**: ಅಗಾಧವಾದ ಪ್ರಾಕೃತಿಕ ಜ್ಞಾನ, ಪ್ರಕೃತಿಯ ಅಗೋಚರ ಶಕ್ತಿಗಳಲ್ಲಿ ಸಿದ್ಧಹಸ್ತರು ಮತ್ತು ಅದರಲ್ಲಿ ನಂಬಿಕೆಯುಳ್ಳವರು.

5. **ವಿಭಿನ್ನ ಮಾತೃಭಾಷಿಕರು:** ಅಲೆಮಾರಿ ಸಮುದಾಯಗಳು ಅನೇಕ ಜನಾಂಗಗಳಿಂದ ಕೂಡಿದ್ದು ಒಂದೊಂದು ಜನಾಂಗದವರು ತಮ್ಮದೇ ಆದ ವಿಶಿಷ್ಟ ಭಾಷೆಗಳಲ್ಲಿ ಮಾತನಾಡುತ್ತಾರೆ.

### ಬುಡಕಟ್ಟು ಸಮುದಾಯ ಮತ್ತು ಅದರ ಲಕ್ಷಣಗಳು



ಬುಡಕಟ್ಟು ಎಂಬ ಪದವನ್ನು ಜೀವ ಜ್ಞಾನಿಗಳು, ಸಮಾಜ ವಿಜ್ಞಾನಿಗಳು ವಿಭಿನ್ನ ಅರ್ಥದಲ್ಲಿ ಬಳಸಿದ್ದಾರೆ. ಕಿಟ್ಟೆಲ್ಲರು ತಮ್ಮ ಅರ್ಥಕೋಶದಲ್ಲಿ ಬುಡಕಟ್ಟು ಎಂಬ ಶಬ್ದಕ್ಕೆ 'ಕುಟುಂಬ' ಹಾಗೂ 'ಕುಲ' ಎಂಬ ಅರ್ಥವನ್ನು ನೀಡಿದ್ದಾರೆ. ಬುಡಕಟ್ಟು ಎಂಬ ಪದವು ಆಂಗ್ಲಭಾಷೆಯಲ್ಲಿ ಬಳಕೆಯಾಗುವ 'ಟ್ರೈಬ್' ಎಂಬ ಪದಕ್ಕೆ ಸಮಾನಾರ್ಥಕ ಪದ. ಇದು ಲಾಟೀನ್ ಭಾಷೆಯ ''ಟ್ರೈಬಸ್' ಎಂಬ ಪದದಿಂದ ಉಗಮಗೊಂಡಿದೆ. ಗ್ರೀಕ್ ಮತ್ತು ರೋಮನ್ ಲೇಖಕರು ಲಾಟಿಯಂ ಜಿಲ್ಲೆಯಲ್ಲಿ ನೆಲಸಿದ ಬುಡಕಟ್ಟಿನವರಿಗೆ ಪ್ರಪಥಮವಾಗಿ 'ಟ್ರೈಬ್' ಎಂಬ ಪದ ಬಳಸಿರುವುದು ತಿಳಿಯುತ್ತದೆ. ಕುಟುಂಬ ಹಾಗೂ ರಕ್ತ ಸಂಬಂಧ ಹೊಂದಿದ ಕುಲಗಳ ಕೂಟಕ್ಕೆ ಕನ್ನಡದಲ್ಲಿ ಬುಡಕಟ್ಟು ಎಂಬ ಪದ ಬಳಸಲಾಗುತ್ತದೆ. ಬುಡಕಟ್ಟುಗಳಿಗೆ ಆದಿವಾಸಿ, ಮೂಲನಿವಾಸಿ, ಗಿರಿಜನ, ವನ್ಯಜಾತಿ, ಎಂಬ ಹೆಸರುಗಳಿಂದಲೂ ಕರೆಯಲಾಗಿದೆ. ''ಒಂದು ನಿರ್ದಿಷ್ಟ ಪ್ರದೇಶದಲ್ಲಿ ವಾಸಿಸುವ ಅಥವಾ ಅದನ್ನು ತನ್ನದೆಂದು ಹೇಳಿಕೊಳ್ಳುವ ರಾಜಕೀಯ, ಸಾಮಾಜಿಕ, ಮತ್ತು ಸಾಂಸ್ಕೃತಿಕ ರಚನೆಗೆ ಹೊಂದಿಕೊಂಡಿರುವ ಸ್ವಯಂ ಆಡಳಿತವುಳ್ಳ ಗುಂಪೇ ಬುಡಕಟ್ಟು'' ಎಂದು ಲಂಡನ್ನಿನ ರಾಯಲ್ ಆಂಥ್ರೋಪಾಲಾಜಿಕಲ್ ಇನ್‌ಸ್ಟಿಟ್ಯೂಟ್ ವ್ಯಾಖ್ಯಾನಿಸಿದೆ.

ಭೌತಿಕ ಮಾನವಶಾಸ್ತ್ರಜ್ಞರು ಮಾನವ ದೈಹಿಕ ಲಕ್ಷಣಗಳನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡಿ ಬುಡಕಟ್ಟುಗಳನ್ನು ಮೂರು ದೊಡ್ಡ ಬುಡಕಟ್ಟುಗಳನ್ನಾಗಿ ವಿಭಾಗಿಸುತ್ತಾರೆ. ಅವೆಂದರೆ: ಕಕೇಶಿಯನ್, ಮಂಗೋಲಿಯನ್ ಮತ್ತು ನೀಗ್ರೊ. ಈ ಪಂಗಡಗಳನ್ನು ಕ್ರಮವಾಗಿ ಬಿಳಿಯರು, ಹಳದಿಯವರು ಮತ್ತು ಕಪ್ಪು ಜನರು ಎಂದು ಕರೆಯಲಾಗುತ್ತದೆ.

**ಅ. ಕಕೇಶಿಯನ್:** ಈ ಬುಡಕಟ್ಟಿಗೆ ಸೇರಿದ ಜನರು ಶ್ವೇತವರ್ಣೀಯರು. ಇವರು ಎತ್ತರ ನಿಲುವು, ಉದ್ದವಾದ, ಚೂಪಾದ, ನೇರವಾದ ಮೂಗು, ಓರೆ ತಲೆ, ನೇರ ದವಡೆ, ಉದ್ದವಾದ ಮುಖ, ಸಣ್ಣ ತುಟಿ, ಮೈಮೇಲೆ ದಟ್ಟವಾಗಿ ಬೆಳೆದ ಕೂದಲು, ಕಂದು ಬಣ್ಣ ಮುಂತಾದ ದೈಹಿಕ ಲಕ್ಷಣಗಳನ್ನು ಹೊಂದಿದ್ದಾರೆ. ಈ ಬುಡಕಟ್ಟಿನ ಜನರು ಯೂರೋಪು, ಉತ್ತರ ಹಾಗೂ ದಕ್ಷಿಣ ಅಮೆರಿಕ, ಪ್ಯಾಲೆಸ್ಟೈನ್, ಏಷ್ಯಾ ಇರಾನ್, ಬಲೂಚಿಸ್ಥಾನ ಮತ್ತು

ಉತ್ತರ ಭಾರತದಲ್ಲಿ ಕಂಡುಬರುತ್ತಾರೆ. ಕಕೇಶಿಯನ್ ಬುಡಕಟ್ಟಿನಲ್ಲಿ ನಾರ್ಡಿಕ್, ಆಲ್ಫೈನ್, ಮೆಡಿಟರೇನಿಯನ್ ಮತ್ತು ಹಿಂದು ಎಂಬ ನಾಲ್ಕು ಉಪಪಂಗಡಗಳಿವೆ.

**ಆ. ಮಂಗೋಲಿಯನ್:** ಈ ಬುಡಕಟ್ಟಿಗೆ ಸೇರಿದ ಜನರು ಪೀತವರ್ಣೀಯರು- ಅಂದರೆ ಹಳದಿ ಬಣ್ಣದವರು. ಗುಂಡು ತಲೆ, ಓರೆ ಕಣ್ಣು, ಚಪ್ಪಟೆಯಾದ ಹಾಗೂ ದುಂಡನೆಯ ಆಕಾರದ ಮುಖ, ನೇರವಾದ ಮತ್ತು ಉದ್ದವಾದ ತಲೆಗೂದಲು ಮೊದಲಾದ ದೈಹಿಕ ಲಕ್ಷಣಗಳನ್ನು ಹೊಂದಿದ್ದಾರೆ. ಅವರ ದವಡೆ ಅಷ್ಟಾಗಿ ಮುಂದಕ್ಕೆ ಚಾಚಿರುವುದಿಲ್ಲ. ಇವರು ಏಷ್ಯಾಖಂಡದ ಪೂರ್ವಭಾಗದಲ್ಲಿಯೂ, ಮಲಯಾ ಪರ್ಯಾಯ ದ್ವೀಪದಲ್ಲಿಯೂ, ಅಮೆರಿಕಾದಲ್ಲಿಯೂ ಇದ್ದಾರೆ. ಈ ಬುಡಕಟ್ಟಿನಲ್ಲಿ ಮಂಗೋಲಿಯನ್, ಮಲೇಶಿಯನ್, ಅಮೆರಿಕನ್ ಇಂಡಿಯನ್ ಎಂಬ ಮೂರು ಉಪಪಂಗಡಗಳಿವೆ.

**ಇ. ನೀಗ್ರೊ:** ಈ ಬುಡಕಟ್ಟಿಗೆ ಸೇರಿದ ಜನರು ಗುಂಡು ತಲೆ, ಚಪ್ಪಟೆಯಾದ ಮೂಗು, ಮುಂದಕ್ಕೆ ಚಾಚಿದ ದವಡೆ, ದುಂಡನೆಯ ಕಂದುಬಣ್ಣದ ಕಿರುಗಣ್ಣುಗಳು, ಹೊಳಪಾದ ಹಾಗೂ ಮೋಟಾದ ಗುಂಗುರು ಕೂದಲು, ದಪ್ಪ ತುಟಿ ಮುಂತಾದ ದೈಹಿಕ ಲಕ್ಷಣಗಳನ್ನು ಹೊಂದಿದ್ದಾರೆ. ಈ ಬುಡಕಟ್ಟಿನ ಜನರು ಆಫ್ರಿಕಾ, ಆಸ್ಟ್ರೇಲಿಯಾ ಮತ್ತು ಭಾರತ-ಭೂಭಾಗಗಳಲ್ಲಿದ್ದಾರೆ. ಆಸ್ಟ್ರೇಲಿಯಾ ಮತ್ತು ಭಾರತದಲ್ಲಿನ ಆದಿವಾಸಿಗಳು ಮಾತ್ರ ಈ ಬುಡಕಟ್ಟಿಗೆ ಸೇರಿದವರು. ಈ ಬುಡಕಟ್ಟಿನಲ್ಲಿ ಮಲೇಷಿಯನ್ನರು, ನೀಗ್ರೊ ಮತ್ತು ಕರಿಯಬಣ್ಣದ ಕುಳ್ಳರು ಎಂಬ ಮೂರು ಉಪಪಂಗಡಗಳಿವೆ. ಈ ಮೂರು ಮುಖ್ಯ ಬುಡಕಟ್ಟು ಜನಾಂಗಗಳನ್ನು ಮತ್ತೆ ಉಪ ಬುಡಕಟ್ಟು ಮತ್ತು ಜನಾಂಗಗಳಾಗಿ ವಿಂಗಡಿಸಲಾಗಿದೆ.

### ಭಾರತದಲ್ಲಿ ಬುಡಕಟ್ಟುಗಳು ವಾಸಿಸುವ ಪ್ರಮುಖ ಮೂರು ಭೌಗೋಳಿಕ ವಲಯಗಳು:

**1. ಉತ್ತರ ಮತ್ತು ಉತ್ತರ-ಪೂರ್ವ ವಲಯ:** ಹಿಮಾಲಯದ ಉಪ ಗಿರಿಕಂದರ ಶ್ರೇಣಿಯಲ್ಲಿ ನಾಗಾ ಬುಡಕಟ್ಟಿನ ಕೊನ್ಯಾಕ್, ರೆಂಗ್ಮಾ, ಸೆಂಗ್ಮಾ, ಅಹೋ, ಅಂಗಾಮಾ, ಲ್ಹೋಟಾ, ಫೋಮೆ, ಚಾಂಗ, ಕಾಬುಲ, ಕುಕಿ ಬುಡಕಟ್ಟಿನ ಲುಶಾಮಿ, ಲಾಖೇರ, ಚಿನ್ಸ್, ಖುಷಿ, ಗಾರೊ, ಕಚಾರಿ, ಲೆಪ್ಚಾ, ಭೂಟಿಯ, ರಾಭಾ, ಥಾರು, ಖಾಸಾ, ಚೇನಿ ಇತ್ಯಾದಿ ಸಮುದಾಯಗಳು ವಾಸಿಸುತ್ತಿವೆ.

**2. ಕೇಂದ್ರೀಯ ಅಥವಾ ಮಧ್ಯ ವಲಯ:** ಈ ವಲಯದಡಿ ಪಶ್ಚಿಮ ಬಂಗಾಳ, ಬಿಹಾರ, ಒರಿಸ್ಸಾ, ದಕ್ಷಿಣದ ಉತ್ತರಪ್ರದೇಶ, ಉತ್ತರ ಮಹಾರಾಷ್ಟ್ರ, ಮಧ್ಯಪ್ರದೇಶ, ಉತ್ತರ ರಾಜಸ್ತಾನ ರಾಜ್ಯಗಳಲ್ಲಿರುವ ಸಂತಾಲ, ಮುಂಡಾ, ಉರಾಂವ, ಭೂಮಿಜ, ಕೋಯ, ಲೋಧಾ, ಸಾಪುರ, ಜವುಂಗ, ಖೊಂಡ, ಕೊರ್ಕು, ಗೊಂಡ, ಭಿಲ್, ಬಿರಹಾರ್, ಕೋಲ್, ಮಾಲೇರ, ಅಸುರ, ಬೈಗಾ, ಪ್ರಧಾನ, ಬಿರಝಿಮ. ಅಗೇರಿಯ, ಹಿಲ್ ಮಾರಿಯ, ಬಿಸೊನ್ ಹಾರ್ನಮಾರಿಮ ಇತ್ಯಾದಿ ಬುಡಕಟ್ಟುಗಳು ಪ್ರಮುಖವಾಗಿವೆ.

**3. ದಕ್ಷಿಣ ವಲಯ:** ಈ ವಲಯದ ಕೇರಳ, ತಮಿಳುನಾಡು, ಆಂಧ್ರಪ್ರದೇಶ, ಕರ್ನಾಟಕ ರಾಜ್ಯಗಳಲ್ಲಿ ಚೆಂಚು, ತೋಡ, ಬಡಗ, ಕೋಟ, ಪಣಿಯನ್, ಇರುಳ, ಕುರಮನ್, ಕುರುಂಬ, ಗೊಂಡ, ರಾಜಗೊಂಡ, ಸೋಲಿಗ, ಕಾಡುಕುರುಬ, ಜೇನುಕುರುಬ, ಕೊರಗ, ಹಸಲ, ಕೋಟ, ಪಳ್ಳಿಯನ್, ಯರವ, ಧನಗರ ಗೌಳಿ, ಕಾಡು ಗೊಲ್ಲ, ಹಾಲಕ್ಕಿ ಒಕ್ಕಲಿಗ, ಇತ್ಯಾದಿ ಬುಡಕಟ್ಟುಗಳು ಪ್ರಮುಖವಾಗಿವೆ.

### *ಬುಡಕಟ್ಟುಗಳ ಲಕ್ಷಣಗಳು*

1. ಸರಳ ಮತ್ತು ಸ್ವಯಂ ಪರಿಪೂರ್ಣತೆ.
2. ಪ್ರಕೃತಿಯ ಪೂಜೆ.
3. ಸಮೂಹದ ಬಗ್ಗೆ ಅವರ ನಿಷ್ಠೆ ಮತ್ತು ಸಮಗ್ರತೆಗೆ ಮಹತ್ವ.
4. ಮಹಿಳೆಯರಿಗೆ ಹೆಚ್ಚಿನ ಸ್ವಾತಂತ್ರ್ಯ ಮತ್ತು ಸಮಾನತೆ.
5. ಒಳಬಾಂಧವ್ಯ ವಿವಾಹ.
6. ವಿಭಿನ್ನ ಮಾತೃಭಾಷೆ.
7. ಪ್ರಾಕೃತಿಕ ಪರಿಸರದಲ್ಲಿಯೇ ವಾಸ.
8. ಬೇಟೆ, ಸ್ವಲ್ಪ ಪ್ರಮಾಣದ ಕೃಷಿ, ಅರಣ್ಯ ಉಪ-ಉತ್ಪನ್ನಗಳ ಆರ್ಥಿಕ ವ್ಯವಸ್ಥೆ.

## ಗ್ರಾಮ ಸಮುದಾಯ

ಪ್ರಾದೇಶಿಕ ಭಾಷೆಗಳಲ್ಲಿ ಗ್ರಾಮಕ್ಕೆ ವಿವಿಧ ಹೆಸರುಗಳಿವೆ. ಉದಾಹರಣೆಗೆ ಹೇಳುವುದಾದರೆ ಹಳ್ಳಿ, ಪಳ್ಳಿ, ಊರ್, ಖೇಡ, ಗಾಂವ್ ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ. ಭಾರತ ಎಂದರೆ 'ಗ್ರಾಮಗಳ ನಾಡು ಹಳ್ಳಿಗಳ ಬೀಡು' ಎಂದು ಹೇಳಲಾಗುತ್ತದೆ. ಭಾರತದ ಪ್ರಾಚೀನ ಸಾಹಿತ್ಯದಲ್ಲಿ ಗ್ರಾಮಗಳ ಸಂಘಟನೆ ಹಾಗೂ ಅವುಗಳ ಆಡಳಿತದ ವಿಷಯವಾಗಿ ಹಲವು ವಿವರಣೆಗಳಿರುವುದನ್ನು ಕಾಣಬಹುದು. ಮಾನವ ಸಮಾಜವು ಗ್ರಾಮ ಎಂಬ ತೊಟ್ಟಿಲಲ್ಲಿಯೇ ವಿಕಾಸವಾಗಿದೆ ಎಂದು ಬೋಗಾರ್ಡಸ್ ಅಭಿಪ್ರಾಯಪಟ್ಟಿದ್ದಾರೆ. ಗ್ರಾಮ ಎಂಬುದು ಅತ್ಯಂತ ಪ್ರಾಚೀನ ನೆಲೆಯಾಗಿದ್ದರೂ ಕೂಡಾ ಇದನ್ನು ಅರ್ಥಪೂರ್ಣವಾಗಿ ವ್ಯಾಖ್ಯಾನಿಸುವುದು ಸಾಧ್ಯವಾಗಿಲ್ಲ. ಬೋಗಾರ್ಡಸ್‌ನ ಪ್ರಕಾರ 'ಕಡಿಮೆ ಜನಸಾಂದ್ರತೆಯುಳ್ಳ, ಸರಳ ಹಾಗೂ ಮಿತವ್ಯಯವಾದ ಜೀವನ ಸಾಗಿಸುವ, ಪ್ರಾಥಮಿಕ ಸಂಬಂಧಗಳನ್ನೊಳಗೊಂಡ ಕುಟುಂಬಗಳ ಒಕ್ಕೂಟವೇ ಗ್ರಾಮ ಸಮುದಾಯ.'

ಆದರೆ ಇಂದು ಗ್ರಾಮಗಳನ್ನು ಗುರುತಿಸಲು ಜನಸಂಖ್ಯೆ ಬಾಹುಳ್ಯವನ್ನೇ ಸಾರ್ವತ್ರಿಕವಾಗಿ ಆಧಾರವಾಗಿಟ್ಟುಕೊಳ್ಳಲಾಗಿದೆ. ಹಾಲೆಂಡನಲ್ಲಿ ಇಪತ್ತು ಸಾವಿರಕ್ಕಿಂತಲೂ

ಕಡಿಮೆ ಜನಸಂಖ್ಯೆ ಹೊಂದಿದ ಪ್ರದೇಶ ಗ್ರಾಮವಾಗಿದೆ. ಅಮೆರಿಕಾದಲ್ಲಿ ಇಪ್ಪತ್ತೈದು ಸಾವಿರ, ಫ್ರಾನ್ಸ್, ಜಪಾನ್ ಮುಂತಾದ ದೇಶಗಳಲ್ಲಿ ಮೂವತ್ತು ಸಾವಿರಕ್ಕಿಂತಲೂ ಕಡಿಮೆ ಜನರು ವಾಸಿಸುವ ಪ್ರದೇಶವನ್ನು ಗ್ರಾಮ ಎಂದು ಕರೆಯಲಾಗುತ್ತದೆ. ಭಾರತದಲ್ಲಿ ಐದು ಸಾವಿರಕ್ಕಿಂತ ಕಡಿಮೆ ಇರುವ ಪ್ರದೇಶಗಳನ್ನು ಗ್ರಾಮ ಎಂದು ಕರೆಯಲಾಗುತ್ತದೆ. ಆದರೆ ಇದಕ್ಕೆ ಬೇರೆಬೇರೆ ಉಪಾದಿಗಳನ್ನು ಸೇರಿಸಲಾಗಿದೆ. ಕಳೆದ ಐದು ಜನಗಣತಿಗಳಿಂದ ಜನಸಂಖ್ಯೆಯ ಗಾತ್ರವಲ್ಲದೆ, ಅಲ್ಲಿನ ವೃತ್ತಿ ಜೀವನ, ಆರ್ಥಿಕ ಬದುಕು, ಆದಾಯದ ಮೂಲಗಳು, ದುಡಿಮೆಯ ಚಟುವಟಿಕೆ, ಅಗತ್ಯ ಮೂಲ ಸೌಲಭ್ಯ, ಇತ್ಯಾದಿಗಳ ಆಧಾರದಲ್ಲಿ ಗ್ರಾಮೀಣ ಪ್ರದೇಶವನ್ನು ವ್ಯಾಖ್ಯಾನಿಸಲಾಗುತ್ತಿದೆ.

ಜನಸಂಖ್ಯಾಶಾಸ್ತ್ರದ ನೆಲೆಯಲ್ಲಿ ಗ್ರಾಮ ಎಂದರೆ ಮುಂದಿನ ವಿವರಣೆ ಕೊಡಬಹುದು: 5000 ಕ್ಕಿಂತಲೂ ಕಡಿಮೆ ಜನವಸತಿ ಹೊಂದಿದ ಪ್ರದೇಶವಾಗಿದ್ದು, ಪ್ರತಿ ಚದರ ಕಿಲೋಮೀಟರಗೆ 400 ಕ್ಕಿಂತ ಕಡಿಮೆ ಜನಸಾಂದ್ರತೆ ಇರಬೇಕು. ಅಲ್ಲಿ ಶೇಕಡಾ 70 ಕ್ಕಿಂತಲೂ ಹೆಚ್ಚು ಜನ ಕೃಷಿ ಹಾಗೂ ಅದಕ್ಕೆ ಪೂರಕವಾದ ವೃತ್ತಿ ಅನುಸರಿಸುತ್ತಿರಬೇಕು. ಕೇವಲ ಜನಸಂಖ್ಯೆಯ ಆಧಾರದಲ್ಲಿ ಗ್ರಾಮೀಣ ಪ್ರದೇಶವನ್ನು ವ್ಯಾಖ್ಯಾನ ಮಾಡುವುದು ಸರಿಯಲ್ಲ, ವ್ಯಕ್ತಿ ವ್ಯಕ್ತಿಯ ನಡುವೆ ಇರುವ ಸಾಮಾಜಿಕ ಸಂಬಂಧಗಳು ಮುಖ್ಯ- ಎಂದು ಕೆಲವು ಸಮಾಜಶಾಸ್ತ್ರಜ್ಞರು ಹೇಳುತ್ತಾರೆ.

### *ಗ್ರಾಮದ ರಚನೆ*

ಗ್ರಾಮ ನಗರಕ್ಕಿಂತ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಭಿನ್ನವಾಗಿರುತ್ತದೆ. ಗ್ರಾಮ ಎಂದಾಕ್ಷಣವೇ ಕೃಷಿ ಹಾಗೂ ಅದಕ್ಕೆ ಪೂರಕವಾದ ವೃತ್ತಿಯನ್ನು ಅವಲಂಬಿಸಿದ ಹಲವು ಕುಟುಂಬಗಳು ವಾಸಿಸುವ ಪ್ರದೇಶ ಎಂದು ಹೇಳಬಹುದು. ಕೆಲವು ಕುಟುಂಬಗಳ ಸುತ್ತಲೂ ಹೊಲ-ಗದ್ದೆಗಳು, ಕಿರುದಾರಿ, ಮರಗಿಡಗಳು ಕೃಷಿ ಅಥವಾ ನಿಸರ್ಗವನ್ನೇ ಅವಲಂಬಿಸಿದ ಜನಸಮೂಹ ಅಲ್ಲಿ ಇರುತ್ತದೆ. ಕೇವಲ ಕೃಷಿ ಅವಲಂಬಿಸಿದ ಕುಟುಂಬಗಳಲ್ಲದೆ ಇತರ ಸಾಕುಪ್ರಾಣಿಗಳಾದ ಎತ್ತು, ಎಮ್ಮೆ, ಆಕಳು, ಕುರಿ, ಕೋಳಿ ಮುಂತಾದವುಗಳು ಇರುತ್ತವೆ. ಒಟ್ಟಿನಲ್ಲಿ ಗ್ರಾಮದ ಭೌತಿಕ ಸ್ವರೂಪ ಎಂದರೆ ಹಲವಾರು ಕೃಷಿ ಸಂಬಂಧಿ ಅಂಶಗಳನ್ನು ಒಳಗೊಂಡಿರುತ್ತದೆ. ಜನಸಂಖ್ಯೆಯ ಪ್ರಮಾಣ, ಜನಸಾಂದ್ರತೆ, ವೃತ್ತಿ, ನಿಸರ್ಗದ ಸ್ವರೂಪ, ನೀರು, ನೆಲ, ಮೂಲ ಸೌಲಭ್ಯಗಳ ದೊರೆಯುವಿಕೆ ಮತ್ತು ಋತುಮಾನಗಳ ಪ್ರಭಾವ ಇಲ್ಲಿ ಅಡಕವಾಗಿರುತ್ತವೆ.

### *ಗ್ರಾಮಗಳ ಪ್ರಕಾರಗಳು*

**ಗ್ರಾಮಗಳನ್ನು ವಿಶಾಲಾರ್ಥದಲ್ಲಿ ಈ ಕೆಳಗಿನಂತೆ ವಿಂಗಡಿಸಬಹುದು.**

**1. ಕೇಂದ್ರೀಕೃತ ಗ್ರಾಮ:** ಈ ಗ್ರಾಮಗಳ ಮುಖ್ಯ ಲಕ್ಷಣ ಎಂದರೆ ಹೊಲಗಳ ಮಧ್ಯದಲ್ಲಿ ಮನೆಗಳಿರುತ್ತವೆ. ಮನೆಗಳು ಒಂದಕ್ಕೊಂದು ಹತ್ತಿರದಲ್ಲಿಯೇ ಇರುತ್ತವೆ. ಮನೆಗಳ ಸುತ್ತಲೂ ಹೊಲಗಳಿರುತ್ತವೆ. ಬೇಸಾಯ ಮಾಡುವವರ ಸಂಖ್ಯೆ ಹೆಚ್ಚಿದಂತೆ ಗ್ರಾಮದ ವ್ಯಾಪ್ತಿ ವಿಶಾಲವಾಗುತ್ತದೆ.

**2. ಪ್ರತ್ಯೇಕಿತ ಹೊಲ ಮನೆಗಳ ಗ್ರಾಮ:** ಇಂತಹ ಗ್ರಾಮಗಳನ್ನು ಕರ್ನಾಟಕದ ಕರಾವಳಿ ಪ್ರದೇಶ ಮತ್ತು ರಾಯಚೂರು ಜಿಲ್ಲೆಯ ನೀರಾವರಿ ಪ್ರದೇಶಗಳಲ್ಲಿ ಕಾಣಬಹುದು. ಇಲ್ಲಿ ಒಂದು ರೈತ ಕುಟುಂಬ ಇನ್ನೊಂದು ರೈತ ಕುಟುಂಬದಿಂದ ಪ್ರತ್ಯೇಕವಾಗಿ ವಾಸಿಸುತ್ತದೆ. ರೈತರು ವಾಸಿಸುವ ಮನೆಯ ಸುತ್ತಲೂ ದನದ ಕೊಟ್ಟಿಗೆ, ಕೃಷಿಗೆ ಬೇಕಾಗುವ ಸಾಧನ ಸಲಕರಣೆ, ಬೆಳೆಗಳನ್ನು ರಾಶಿ ಮಾಡುವ ಸ್ಥಳ, ದನಗಳಿಗೆ ಬೇಕಾಗುವ ಮೇವು- ಹುಲ್ಲುಗಳ ಬಣವೆ ಇರುತ್ತವೆ.

**3. ಚದುರಿದ ಗುಂಪು ಗ್ರಾಮ:** ಇಂತಹ ಗ್ರಾಮಗಳು, ಕರ್ನಾಟಕದ ಗುಡ್ಡಗಾಡು ಪ್ರದೇಶ ಮತ್ತು ಮಲೆನಾಡು ಪ್ರದೇಶದ ಜಿಲ್ಲೆಗಳಲ್ಲಿ ಕಾಣಬಹುದು. ಇಲ್ಲಿ ಮನೆಗಳು ಒಟ್ಟಾಗಿ ಇರುವುದಿಲ್ಲ. ನಾಲ್ಕಾರು ಕುಟುಂಬಗಳು ಚಿಕ್ಕ ದಿನ್ನೆಯ ಮೇಲೆ ಇದ್ದರೆ. ಅದೇ ದಿನ್ನೆಯ ಇಳಿಜಾರಿನಲ್ಲಿ ಮತ್ತೆ ಕೆಲವು ಕುಟುಂಬಗಳು ಇರುತ್ತವೆ. ಇಂತಹ ಹಲವು ಮನೆಗಳ ಗುಂಪು ಒಂದು ಗ್ರಾಮ ಎಂದು ಕರೆಯಿಸಿಕೊಳ್ಳುತ್ತದೆ.

**4. ಸಾಲುಮನೆಗಳ ಗ್ರಾಮ:** ಈ ಗ್ರಾಮಗಳಲ್ಲಿ ಬೀದಿಯ ಎರಡು ಬದಿಗೆ ಸಾಲಾಗಿ ಹಲವು ಕುಟುಂಬಗಳು ವಾಸಿಸುತ್ತವೆ. ಇಲ್ಲಿ ಒಂದು ಮನೆ ಇನ್ನೊಂದು ಮನೆಗೆ ಅಂಟಿಕೊಂಡಂತೆ ಇರುತ್ತದೆ. ಇಲ್ಲಿ ಮನೆಗಳನ್ನು ವಿಭಜಿಸಲು ಎರಡು ಮನೆ ನಡುವೆ ಒಂದು ಗೋಡೆ ಇರುತ್ತದೆ. ಎಲ್ಲ ಮನೆಗಳು ಒಂದೇ ಕಟ್ಟಡದ ವಿಸ್ತರಣೆಯಂತೆ ಕಾಣುತ್ತವೆ.

**5. ಚಕ್ರಾಕಾರದ ಗ್ರಾಮಗಳು:** ಈ ಗ್ರಾಮಗಳನ್ನು ದುಂಡಾಕಾರದ ಗ್ರಾಮಗಳೆಂದು ಕರೆಯುತ್ತಾರೆ. ವಿಶೇಷವಾಗಿ ದೇವಾಲಯ, ಮಸೀದಿ, ಚರ್ಚ್, ಕೆರೆ ಮುಂತಾದ ಸ್ಥಳಗಳ ಸುತ್ತಲೂ ಜನರ ವಾಸದ ಮನೆಗಳಿರುತ್ತವೆ.

**6. ಚೌಕಾಕಾರದ ಅಥವಾ ಆಯತಾಕಾರದ ಗ್ರಾಮ:** ಈ ಗ್ರಾಮಗಳು ಸಾಲುಮನೆ ಗ್ರಾಮವನ್ನೇ ಹೋಲುತ್ತವೆ. ಇವುಗಳ ವಿಶಿಷ್ಟತೆ ಎಂದರೆ ಮನೆಗಳ ಸಾಲು ಒಂದಕ್ಕೊಂದು ಸಮಾನಾಂತರ ಅಥವಾ ಲಂಬ ರೂಪದಲ್ಲಿ ಇರುತ್ತವೆ.

**7. ಕೂಡುದಾರಿ ಹಾಗೂ ಮಾರುಕಟ್ಟೆ ಗ್ರಾಮ:** ಕೃಷಿಯೇತರ ವೃತ್ತಿ ಅನುಸರಿಸುವ ಕುಟುಂಬಗಳು ಇಲ್ಲಿ ವಾಸಿಸುತ್ತವೆ. ಎರಡು ಮೂರು ರಸ್ತೆಗಳು ಕೂಡುವ ಪ್ರದೇಶದಲ್ಲಿ ಮನೆಗಳಿರುತ್ತವೆ. ವಾಸದ ಮನೆಯ ಜೊತೆಗೆ ಅಂಗಡಿ, ಉಪಾಹಾರ ಮಂದಿರ ಇರುತ್ತವೆ. ಇವುಗಳನ್ನು ಕೈಮರ, ಜಂಕ್ಷನ್, ಕೂಡು, ಇತ್ಯಾದಿ ಹೆಸರುಗಳಿಂದ ಕರೆಯಲಾಗುತ್ತದೆ.

ಮೇಲೆ ವಿವರಿಸಿದ ಗ್ರಾಮಗಳ ವಿಂಗಡನೆ ಒಂದು ರೀತಿ ಅಪೂರ್ಣವಾಗಿಯೆ ಇರಬಹುದು. ಕೆಲವು ಗ್ರಾಮಗಳು ಇಂತಹ ವರ್ಗೀಕರಣದಲ್ಲಿ ಸೇರ್ಪಡೆಯಾಗದೇ ಹೋಗಬಹುದು. ಏಕೆಂದರೆ ಅಭಿವೃದ್ಧಿ, ತಂತ್ರಜ್ಞಾನ ಆಧಾರಿತ ಕೃಷಿ ಹಾಗೂ ಹೊಸ ಹೊಸ ಉದ್ಯೋಗಗಳಿಂದ ಉಂಟಾಗುವ ಬದಲಾವಣೆಗಳು ಗ್ರಾಮಗಳ ರಚನೆಯನ್ನು ವೇಗವಾಗಿ ಬದಲಾಯಿಸುತ್ತವೆ.

## ಗ್ರಾಮ ಸಮುದಾಯದ ಲಕ್ಷಣಗಳು

ಭಾರತದ ಗ್ರಾಮ ಸಮಾಜವು ಮೇಲಿಂದ ಮೇಲೆ ಅನೇಕ ಬದಲಾವಣೆಗೆ ಒಳಗೊಂಡಿದ್ದರೂ ಕೆಲವು ವಿಶಿಷ್ಟ ಲಕ್ಷಣಗಳನ್ನು ಒಳಗೊಂಡಿದೆ:



**1. ಗಾತ್ರದಲ್ಲಿ ಚಿಕ್ಕದು:** ಮ್ಯಾಕ್ಸ್ ವೇಬರ್ ಹೇಳಿದಂತೆ ಬಹುಸಂಖ್ಯಾತ ಭಾರತೀಯರು ಗ್ರಾಮವಾಸಿಗಳು. 2011 ನೇ ಜನಗಣತಿ ವರದಿ ಪ್ರಕಾರ ಒಟ್ಟು ಜನರಲ್ಲಿ ಶೇಕಡ 68 ಪ್ರಮಾಣದ ಜನರು ಗ್ರಾಮವಾಸಿಗಳು. ಇದರ ಪ್ರಭಾವವನ್ನು ಜನತೆಯ ಸಾಮಾಜಿಕ ಜೀವನದ ಮೇಲೆ ಕಾಣಬಹುದು. ಗ್ರಾಮವು ಸಾಮಾನ್ಯವಾಗಿ ಚಿಕ್ಕಗಾತ್ರವನ್ನು ಹೊಂದಿರುತ್ತದೆ. ಜನಸಾಂದ್ರತೆ ದಟ್ಟವಾಗಿ ಇರುವುದಿಲ್ಲ.

**2. ಕೃಷಿ ಮತ್ತು ಕೃಷಿ ಪೂರಕ ಆರ್ಥಿಕ ಜೀವನ:** ಗ್ರಾಮೀಣ ಜೀವನ ಹೆಚ್ಚು ಸರಳವಾದುದು. ಕೃಷಿ ಮತ್ತು ಕೃಷಿ ಪೂರಕ ಚಟುವಟಿಕೆಗಳು ಇಲ್ಲಿ ಪ್ರಮುಖವಾಗಿವೆ. ವ್ಯವಸಾಯವು ಮುಖ್ಯವಾಗಿ ಪ್ರಕೃತಿಯನ್ನೇ ಅವಲಂಬಿಸಿದೆ. ಗ್ರಾಮೀಣ ಪ್ರದೇಶದಲ್ಲಿ ಶೇಕಡ 59 ರಷ್ಟು ಪುರುಷರು ಮತ್ತು ಶೇಕಡ 75 ರಷ್ಟು ಮಹಿಳೆಯರು ಜೀವನೋಪಾಯಕ್ಕೆ ಕೃಷಿಯನ್ನು ನೇರವಾಗಿ ಅವಲಂಬಿಸಿದ್ದಾರೆ. ಕಳೆದ ಮೂರು ಜನಗಣತಿ ಅವಧಿಯಲ್ಲಿ ಕೃಷಿಕೂಲಿ ಕಾರ್ಮಿಕರ ಸಂಖ್ಯೆ74.6 ಮಿಲಿಯನ್(1991) ಯಿಂದ 106.8 ಮಿಲಿಯನ್ (2001) ಮತ್ತು 144 ಮಿಲಿಯನ್‌ಗೆ (2011) ಹೆಚ್ಚಳವಾಗಿದೆ. ಕೃಷಿಯು ಹವಮಾನದ ಜೊತೆ ಆಡುವ ಜೂಜಾಟ ಎಂದು ಹೇಳಲಾಗುತ್ತದೆ. ಕೃಷಿ ಮತ್ತು ಕೃಷಿ ಪೂರಕ ಚಟುವಟಿಕೆಗಳು ನಿಶ್ಚಿತ ಆದಾಯ ಇಲ್ಲದೆ ಗ್ರಾಮೀಣ ಬದುಕಿನ ಬಹುದೊಡ್ಡ ಸವಾಲಾಗಿದೆ.

**3. ಸಮುದಾಯ ಜೀವನ:** ಗ್ರಾಮ ಸಮುದಾಯದವರು ಪ್ರಕೃತಿಯಲ್ಲಿ ಅಚಲವಾದ ಭಕ್ತಿ ಇಟ್ಟಿರುತ್ತಾರೆ. ಮಳೆಗಾಗಿ ಪೂಜೆ ಪುನಸ್ಕಾರಗಳನ್ನು ಎಲ್ಲರೂ ಸೇರಿ ಮಾಡುತ್ತಾರೆ. ಸ್ಥಳೀಯ ದೇವರುಗಳ ಜಾತ್ರೆ, ಹಬ್ಬಹರಿದಿನಗಳನ್ನು ಸಾಮೂಹಿಕವಾಗಿ ಆಚರಣೆ ಮಾಡುತ್ತಾರೆ. ಸಾಮಾನ್ಯವಾಗಿ ಎಲ್ಲರೂ ಸೌಹಾರ್ದತೆಯಿಂದ ಜೀವಿಸುತ್ತಾರೆ. ‘ತಾನು

ಎಲ್ಲರಿಗಾಗಿ ಎಲ್ಲರೂ ತನಗಾಗಿ' ಎಂಬ ಸಹಕಾರ ತತ್ವದಲ್ಲಿ ಗ್ರಾಮಗಳು ಬೆಳೆದು ಬಂದಿವೆ. ಇಲ್ಲಿ ಸ್ಪರ್ಧೆ, ವಂಚನೆ, ಮೋಸ, ಕೃತ್ರಿಮತೆ, ದೌರ್ಜನ್ಯಗಳಿಗೆ ಹೆಚ್ಚು ಸ್ಥಾನವಿಲ್ಲ.

**4. ಪ್ರಜಾಪ್ರಭುತ್ವದ ಆದರ್ಶ:** ಭಾರತದ ಗ್ರಾಮಗಳು ಇಂದು ಪ್ರಜಾಪ್ರಭುತ್ವದ ತಳಹದಿಯ ಮೇಲೆ ರೂಪುಗೊಳ್ಳುತ್ತಿವೆ. ಗ್ರಾಮದ ಕೆಲವು ಸಾಮಾನ್ಯ ಕಾರ್ಯಗಳಲ್ಲಿ ಎಲ್ಲಾ ಪಂಗಡದ ಹಾಗೂ ಜಾತಿಯ ಜನರು ಭಾಗವಹಿಸುತ್ತಿದ್ದಾರೆ. ಗ್ರಾಮ ಪಂಚಾಯತಿಗಳಲ್ಲಿ ಎಲ್ಲಾ ಪಂಗಡ ಮತ್ತು ಜಾತಿಯವರು ಭಾಗವಹಿಸುವುದೇ ಇದಕ್ಕೆ ನಿದರ್ಶನವಾಗಿದೆ.

**5 ನಾಗರಿಕ ಮೂಲ ಸೌಲಭ್ಯಗಳ ಕೊರತೆ:** ಗ್ರಾಮೀಣ ಪ್ರದೇಶದಲ್ಲಿ ಮಾನವ ಸಮಾಜಕ್ಕೆ ಬೇಕಾಗುವ ಆರೋಗ್ಯ, ಶಿಕ್ಷಣ, ನಾಗರಿಕ ರಕ್ಷಣಾ ವ್ಯವಸ್ಥೆ ಮತ್ತು ನ್ಯಾಯಾಂಗ ವ್ಯವಸ್ಥೆ ಇತ್ಯಾದಿಗಳ ಅಸಮತೋಲನ ಇರುವುದು ಸಹ ವಾಸ್ತವ ಸಂಗತಿ.

## ನಗರ ಸಮುದಾಯ

ನಗರ ಸಮುದಾಯಗಳು ಮಾನವ ಚರಿತ್ರೆಯಷ್ಟೇ ಇತಿಹಾಸ ಹೊಂದಿವೆ. ಕಾಲ ಕಾಲಕ್ಕೆ ಮಾನವನಲ್ಲಿ ಉಂಟಾದ ಉತ್ಪಾದನಾ ಸಾಮರ್ಥ್ಯ ಮತ್ತು ಉತ್ಪಾದನಾ ಮಾರ್ಗಗಳು ನಗರಗಳ ಸ್ವರೂಪವನ್ನು ರೂಪಾಂತರಿಸಿವೆ. ಹರಪ್ಪ, ಮೊಹೆಂಜೊದಾರೊ ನಗರಗಳಿಂದ ಇಲ್ಲಿಯವರೆಗೂ ನಗರಗಳು ಬೃಹತ್ ಪ್ರಮಾಣದಲ್ಲಿ ವಿಸ್ತರಣೆಯಾಗುತ್ತಿವೆ. ಹೀಗಾಗಿ ನಗರಗಳು ಮಾನವ ಜೀವನವಿಕಾಸದಲ್ಲಿ ಒಂದು ವಿಶಿಷ್ಟ ಹಂತ. ಇದು ಮಾನವ ಜೀವನ ಶೈಲಿಯಲ್ಲಿ ಉಂಟಾದ ಮಾರ್ಪಾಡುಗಳ ಜೊತೆಗೆ ಮಾನವ ನಾಗರಿಕತೆಯನ್ನು ರೂಪಿಸುವಲ್ಲಿ ನಗರಗಳು ಮಹತ್ವದ ಪಾತ್ರವನ್ನು ನಿರ್ವಹಿಸಿವೆ.



ಕೈಗಾರಿಕಾ ಕ್ರಾಂತಿಯ ನಂತರ ನಗರಗಳ ಸ್ವರೂಪದಲ್ಲಿ ಮಹತ್ವದ ರೂಪಾಂತರವಾಗಿದೆ. ತಂತ್ರಜ್ಞಾನದ ಕ್ರಾಂತಿಯು ಕೈಗಾರಿಕಾ ಕ್ರಾಂತಿಯನ್ನು ಪ್ರಭಾವಿಸುತ್ತದೆ. ಕೈಗಾರಿಕಾ ಕ್ರಾಂತಿಯ ಪ್ರಕ್ರಿಯೆಗಳು ನಗರಗಳ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವನ್ನು ನಿರ್ವಹಿಸಿವೆ. ಆ ಸಮಯದಲ್ಲಿ ಲೆಕ್ಕವಿಲ್ಲದಷ್ಟು ಜನರು ಗ್ರಾಮೀಣ ಪ್ರದೇಶದಿಂದ ನಗರ ಪ್ರದೇಶಕ್ಕೆ ವಲಸೆ ಬಂದರು. ಚಿಕ್ಕ-ಪುಟ್ಟ ಪಟ್ಟಣಗಳು, ಬೃಹತ್ ನಗರಗಳಾಗಿ

ರೂಪಾಂತರವಾದವು. ಕೃಷಿಯಲ್ಲಿನ ಹೆಚ್ಚುವರಿ ಉತ್ಪಾದನೆಯು ಕೃಷಿಯೇತರ ಚಟುವಟಿಕೆಗಳನ್ನು ಹೆಚ್ಚಿಸಿತು. ಹೆಚ್ಚುವರಿ ಉತ್ಪಾದನೆಯು ಬೃಹತ್ ಕಟ್ಟಡಗಳ ನಿರ್ಮಾಣಕ್ಕೆ ಮತ್ತು ಬೃಹತ್ ಉದ್ಯಮಗಳ ಸ್ಥಾಪನೆಗೆ ಮತ್ತು ಬೃಹತ್ ವ್ಯವಹಾರ-ವಾಣಿಜ್ಯಗಳಿಗೆ ಎಡೆಮಾಡಿಕೊಟ್ಟಿತು. ಈ ಪ್ರಕ್ರಿಯೆಯು ನಗರಗಳನ್ನು ಗ್ರಾಮಗಳಿಂದ ಪ್ರತ್ಯೇಕಿಸಿ ಗ್ರಾಮ ಮತ್ತು ನಗರ ಎನ್ನುವ ಎರಡು ವ್ಯವಸ್ಥೆಗಳನ್ನು ಹುಟ್ಟುಹಾಕಿತು.

ನಗರಗಳನ್ನು ಆಧುನಿಕ ಜನವಸತಿ ನೆಲೆಗಳು ಎಂದು ಹೇಳಲಾಗುತ್ತದೆ. ನಗರ ಜೀವನವು ಮಾನವನ ಸಾಮಾಜಿಕ ಚರಿತ್ರೆಯಲ್ಲಿ ಅತಿ ಉನ್ನತ ಮತ್ತು ವೈಭವಯುತ ಜೀವನ ಮಾದರಿ ಅನ್ನಿಸುವಾಗಲೇ ಅಷ್ಟೇ ಸಂಕೀರ್ಣವಾಗಿದೆ. ಶಾಸನಬದ್ಧ ಅರ್ಥದಲ್ಲಿ ಒಂದು ರಾಷ್ಟ್ರದ ಆಡಳಿತ ಒಂದು ಜನವಸತಿಗೆ, ನಗರ ಸ್ಥಾನಮಾನ ಇದೆ, ಎಂದು ಅಧಿಕೃತ ಪ್ರಕಟಣೆ ಹೊರಡಿಸಿದಲ್ಲಿ ಆಗ ಅದು ನಗರವಾಗುತ್ತದೆ. ಯಾವ ಸಮುದಾಯ 5000 ಜನಸಂಖ್ಯೆಗಿಂತ ಹೆಚ್ಚಿಗೆ ಜನರನ್ನು ಹೊಂದಿದ್ದು, ಪ್ರತಿ ಚದರ ಕಿಲೋಮೀಟರಿಗೆ 1000 ಜನಸಾಂದ್ರತೆ ಹೊಂದಿದ್ದು, ಅಲ್ಲಿ ನೆಲೆಸಿರುವ ಜನರಲ್ಲಿ ಶೇಕಡ 75 ಕ್ಕಿಂತ ಹೆಚ್ಚು ಜನರು ಬದುಕಿಗೆ ಕೃಷಿಯೇತರ ಚಟುವಟಿಕೆಗಳಲ್ಲಿ ತೊಡಗಿದ್ದಾರೊ ಅದಕ್ಕೆ ನಗರ ಎಂದು ಕರೆಯುತ್ತಾರೆ. ಜನಸಂಖ್ಯಾಶಾಸ್ತ್ರದ ದೃಷ್ಟಿಯಲ್ಲಿ ಯಾವ ಪ್ರದೇಶ ಅತಿ ಹೆಚ್ಚು ಜನಸಂಖ್ಯೆಮತ್ತು ಜನಸಾಂದ್ರತೆ ಹೊಂದಿರುತ್ತದೆಯೊ ಅದನ್ನು ನಗರ ಎಂದು ಕರೆಯಬಹುದು.

ನಗರೀಕರಣ ಒಂದು ಸಮಾಜದಲ್ಲಿ ಕಾಲದಿಂದ ಕಾಲಕ್ಕೆ ನಡೆಯುವ ಪ್ರಕ್ರಿಯೆ. ಹಲವು ಕಾರಣಗಳಿಂದ ನಗರವಾಸಿಗಳ ಸಂಖ್ಯೆಯಲ್ಲಿ ಹೆಚ್ಚಳವಾಗುತ್ತದೆ. ಒಂದು ಸಮಾಜ ತನ್ನ ಗ್ರಾಮೀಣ ನೆಲೆಯಿಂದ ನಗರ ಸಮಾಜದತ್ತ ಪರಿವರ್ತನೆ ಹೊಂದುವ ಪ್ರಕ್ರಿಯೆಯೆ ನಗರೀಕರಣ. ಔದ್ಯಮೀಕರಣವು ಎಲ್ಲ ಸಮಾಜಗಳಿಗೆ ಆರ್ಥಿಕ ಚೈತನ್ಯ ಒದಗಿಸಿ ಜನವಸತಿ ನೆಲೆಗಳಿಗೆ ಹೊಸ ಸ್ವರೂಪ ನೀಡಲು ಪ್ರಾರಂಬಿಸಿದಾಗಿನಿಂದ ನಗರೀಕರಣ ಪ್ರಕ್ರಿಯೆ ನಡೆಯುತ್ತಿದೆ. ಹೀಗಾಗಿ ನಗರೀಕರಣ ಪ್ರಕ್ರಿಯೆ ಇಂದು ಜಗತ್ತಿನ ಎಲ್ಲ ರಾಷ್ಟ್ರಗಳಲ್ಲಿ ಕಂಡುಬರುತ್ತದೆ.

### *ನಗರ ಸಮುದಾಯದ ಲಕ್ಷಣಗಳು:*

**1. ಗಾತ್ರದಲ್ಲಿ ದೊಡ್ಡದು:** ನಗರ ಸಮುದಾಯ ದೊಡ್ಡದಿದ್ದು, ಹೆಚ್ಚಿನ ಜನಸಾಂದ್ರತೆ ಹೊಂದಿರುತ್ತದೆ ಉದಾಹರಣೆಗೆ ಬೆಂಗಳೂರಿನಲ್ಲಿ 2011 ರ ಜನಗಣತಿಯಂತೆ ಒಂದು ಚದುರ ಕಿಲೋ ಮೀಟರ್ ನಲ್ಲಿ 4381 ಜನರು ವಾಸ ಮಾಡುತ್ತಿದ್ದಾರೆ.

**2. ಸಾಂಸ್ಕೃತಿಕ ಬಹುತ್ವ:** ನಗರಗಳಲ್ಲಿ ಹೆಚ್ಚಿನ ಸಾಂಸ್ಕೃತಿಕ ಬಹುತ್ವವನ್ನು ನಾವು ಕಾಣಬಹುದು. ಏಕೆಂದರೆ, ಬೇರೆ ಬೇರೆ ಭಾಷೆಗಳನ್ನು ಮಾತನಾಡುವ ಜನರು ಬೇರೆ ಬೇರೆ ಪ್ರದೇಶಗಳಿಂದ ಬಂದು ಒಂದೇ ಕಡೆ ವಾಸಮಾಡುತ್ತಿರುತ್ತಾರೆ. ಆಗ ಅವರ ಜೀವನವು ಒಂದೇ ಸಾಂಸ್ಕೃತಿಕ ನೆಲೆಯಲ್ಲಿ ನಡೆಯದೆ, ವಿವಿಧ ಭಾಷಿಕ, ವಿವಿಧ ಧಾರ್ಮಿಕ ಮತ್ತು ಸಾಂಸ್ಕೃತಿಕ ನೆಲೆಯಲ್ಲಿ

ನಡೆಯುತ್ತಿರುತ್ತದೆ.

**3. ಕೃಷಿಯೇತರ ವೃತ್ತಿ:** ನಗರಗಳಲ್ಲಿ ಹೆಚ್ಚಿನ ಜನರು ಕೃಷಿಯೇತರ ವೃತ್ತಿಗಳನ್ನು ಮಾಡುತ್ತಾರೆ. ಅಂತಹ ಚಟುವಟಿಕೆಗಳೆಂದರೆ ಕೈಗಾರಿಕಾ ಉತ್ಪಾದನೆ, ವ್ಯಾಪಾರ ಮತ್ತು ವಾಣಿಜ್ಯ, ವೃತ್ತಿಪರತೆ ಮತ್ತು ಆಡಳಿತದಲ್ಲಿ ಉದ್ಯೋಗ- ಹೀಗೆ ವಿವಿಧ ವೃತ್ತಿಗಳಲ್ಲಿ ಜನರು ತೊಡಗಿರುತ್ತಾರೆ.

**4. ಗೌಣವಾಗುವ ಪ್ರಾಥಮಿಕ ಸಂಬಂಧಗಳು:** ನಗರ ಸಮುದಾಯದಲ್ಲಿ ಔಪಚಾರಿಕ ಸಂಬಂಧಗಳೇ ಹೆಚ್ಚು. ಒಂದು ರೀತಿಯಲ್ಲಿ ಯಾರೂ ಯಾರನ್ನೂ ಹೆಚ್ಚಾಗಿ ಹಚ್ಚಿಕೊಳ್ಳುವುದಿಲ್ಲ. ತಾವಾಯಿತು ತಮ್ಮ ಕುಟುಂಬ ಜೀವನವಾಯಿತು ಎಂದು ಕೊಂಡವರೇ ಹೆಚ್ಚು.

**5. ಔಪಚಾರಿಕ ಸಾಮಾಜಿಕ ನಿಯಂತ್ರಣ:** ನಗರ ಪ್ರದೇಶದಲ್ಲಿ ಸಮಾಜದ ರಕ್ಷಣೆ ಮತ್ತು ನಾಗರಿಕ ಹಕ್ಕುಗಳ ರಕ್ಷಣೆಗೆ ಬೇಕಾಗುವ ಪೋಲೀಸ್ ವ್ಯವಸ್ಥೆ, ನ್ಯಾಯಾಂಗ ಇನ್ನೂ ಮುಂತಾದ ನಾಗರಿಕ ರಕ್ಷಣಾ ವ್ಯವಸ್ಥೆಗಳ ಮೂಲಕ ಸಾಮಾಜಿಕ ನಿಯಂತ್ರಣ ಜಾರಿಯಲ್ಲಿರುತ್ತದೆ.

## ಅಭ್ಯಾಸಗಳು

### I. ಖಾಲಿ ಬಿಟ್ಟಿರುವ ಜಾಗಗಳನ್ನು ಸೂಕ್ತ ಪದಗಳಿಂದ ಭರ್ತಿ ಮಾಡಿರಿ.

1. 1 ಅಲೆಮಾರಿತನವು ಒಂದು ಜೀವನ ವಿಧಾನ ಎಂದು _______ ಹೇಳುತ್ತದೆ.
2. ಭಾರತೀಯ ಸಮಾಜದ ಆಧಾರ ಸ್ತಂಭ _______ ಸಮುದಾಯ.
3. ಈಶಾನ್ಯ ವಲಯದ ಆದಿವಾಸಿಗಳು _______ .

### II. ಈ ಕೆಳಗಿನ ಪ್ರಶ್ನೆಗಳಿಗೆ ಚರ್ಚಿಸಿ ಉತ್ತರ ಬರೆಯಿರಿ.

1. ಬುಡಕಟ್ಟು ಎಂದರೇನು?
2. ಗ್ರಾಮ ಎಂದರೇನು?
3. ನಗರ ಪರಿಕಲ್ಪನೆಯನ್ನು ತಿಳಿಸಿ.
4. ಬುಡಕಟ್ಟು ಸಮುದಾಯಗಳ ಲಕ್ಷಣಗಳನ್ನು ವಿವರಿಸಿ.
5. ಭೌಗೋಳಿಕ ನೆಲೆಯಲ್ಲಿ ಭಾರತದ ಬುಡಕಟ್ಟುಗಳನ್ನು ಹೇಗೆ ವಿಭಾಗಿಸಲಾಗಿದೆ ವಿವರಿಸಿ.

6. ಗ್ರಾಮ ಸಮುದಾಯಗಳ ಪ್ರಕಾರಗಳನ್ನು ವಿವರಿಸಿ.

## III. ಚಟುವಟಿಕೆ:

1. ಗ್ರಾಮೀಣ ಮತ್ತು ನಗರ ಜೀವನದ ಸವಾಲು ಸಾಧ್ಯತೆಗಳನ್ನು ಕುರಿತು ಮಕ್ಕಳನ್ನು ಎರಡು ಗುಂಪುಗಳಾಗಿ ವಿಭಾಗಿಸಿ ಚರ್ಚೆಗಳನ್ನು ಏರ್ಪಡಿಸುವುದು.

2. ಶಾಲೆಗೆ ಸಮೀಪವಿರುವ/ ಮಕ್ಕಳಿಗೆ ತಿಳಿದಿರುವ ಬುಡಕಟ್ಟಿನ ಜೀವನ ಶೈಲಿಯನ್ನು ಸಂಗ್ರಹಿಸುವುದು.

## IV. ನಿಯೋಜಿತ ಕಾರ್ಯ

1. ಮಕ್ಕಳಿಗೆ ಗ್ರಾಮ/ ನಗರದಲ್ಲಿ ಸೌಲಭ್ಯಗಳ ಕೊರತೆಯನ್ನು ಸರಿಪಡಿಸಲು ಗ್ರಾಮ ಪಂಚಾಯತಿ/ ನಗರ ಸಭೆ/ ಕಾರ್ಪೋರೇಷನ್‌ಗಳು ಕೈಗೊಂಡಿರುವ ಕ್ರಮಗಳ ಬಗ್ಗೆ ಸ್ಥಳೀಯ ಸರ್ಕಾರಗಳ ಸದಸ್ಯರಿಂದ ಮಾಹಿತಿ ಪಡೆಯಲು ತಿಳಿಸುವುದು.

## ಭೂಗೋಳ ವಿಜ್ಞಾನ ಅಧ್ಯಾಯ- 1 ನಮ್ಮ ರಾಜ್ಯ- ಕರ್ನಾಟಕ

**ಈ ಅಧ್ಯಾಯದಲ್ಲಿ ಕೆಳಗಿನ ಅಂಶಗಳನ್ನು ತಿಳಿಯುತ್ತೇವೆ.**

1. ಪೀಠಿಕೆ: ನಮ್ಮ ನಾಡಿನ ಹಿರಿಮೆ-ಗರಿಮೆ ಹಾಗೂ ಪರಂಪರೆಗಳ ಬಗ್ಗೆ.
2. 'ಕರ್ನಾಟಕ' ಎಂಬ ಹೆಸರಿನ ಹಿನ್ನೆಲೆ ಹಾಗೂ ಕರ್ನಾಟಕ ರಾಜ್ಯ ರೂಪುಗೊಂಡ ಬಗೆ.
3. ಕರ್ನಾಟಕದ ಭೌಗೋಳಿಕ ಸ್ಥಾನ, ವಿಸ್ತೀರ್ಣ, ಭೂ ಮತ್ತು ಜಲಮೇರೆಗಳು ಹಾಗೂ ನೆರೆಯ ರಾಜ್ಯಗಳು.

### ಪೀಠಿಕೆ:

ಹಿಂದಿನ ತರಗತಿಯಲ್ಲಿ ಪ್ರಾಕೃತಿಕ ಭೂಗೋಳಶಾಸ್ತ್ರವನ್ನು ಕುರಿತು ಅಧ್ಯಯನ ಮಾಡಲಾಗಿದೆ. ಈಗ ನಮ್ಮ ನಾಡು, ಕನ್ನಡನಾಡು, ಕರ್ನಾಟಕವನ್ನು ಕುರಿತ ಅಧ್ಯಯನಕ್ಕೆ ಅಡಿಯಿಡುತ್ತಿದ್ದೇವೆ. ಇದು ತನ್ನದೇ ಆದ ಹಿರಿಮೆ-ಗರಿಮೆ ಮತ್ತು ಪರಂಪರೆಯುಳ್ಳ ಭಾರತದ ರಾಜ್ಯಗಳಲ್ಲಿ ಒಂದು. ಉತ್ತಮ ಸನ್ನಿವೇಶ, ವೈವಿಧ ಭೂಸ್ವರೂಪಗಳು, ಸಸ್ಯ ಮತ್ತು ಪ್ರಾಣಿವರ್ಗ, ವಿವಿಧ ಮಣ್ಣು, ನದಿಜಾಲ, ಖನಿಜ ಮತ್ತು ಜನಸಂಪತ್ತು ಮೊದಲಾದವುಗಳ ಸಮೃದ್ಧ ನಾಡು. ಸಾಹಿತ್ಯ, ಕಲೆ, ಸಂಸ್ಕೃತಿ, ಧಾರ್ಮಿಕ, ಆಧ್ಯಾತ್ಮಿಕ, ಐತಿಹಾಸಿಕ ಪ್ರಸಿದ್ಧ, ಪವಿತ್ರ ಮತ್ತು ಪುಣ್ಯಕ್ಷೇತ್ರಗಳನ್ನುಳ್ಳ ನಾಡು. ಪ್ರಕೃತಿ ಸೌಂದರ್ಯ ಮತ್ತು ವನಜೀವಿಗಳ ಸಮೃದ್ಧಿ ಹಾಗೂ ವಿಶ್ವ ಪರಂಪರೆಯ ಸಾಲಿನಲ್ಲಿ ಪ್ರಸಿದ್ಧಿ ಪಡೆದ ಕೀರ್ತಿ ನಮ್ಮ ರಾಜ್ಯಕ್ಕಿದೆ.

### ಹೆಸರಿನ ಹಿನ್ನೆಲೆ:

ಕರ್ನಾಟಕ ಎಂಬ ಹೆಸರು ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದೆ. ಇದನ್ನು ಕರುನಾಡು (ಕರ್ + ನಾಡು- ಅಂದರೆ ಕಪ್ಪುಮಣ್ಣಿನ ನಾಡು) ಎಂದು ಕರೆಯುತ್ತಿದ್ದರು. ತಮಿಳಿನ 'ಶಿಲಪ್ಪದಿಕಾರಂ' ಪ್ರಾಚೀನ ಕೃತಿಯಲ್ಲಿ 'ಕರುನಾಟ್' ಎಂಬ ಶಬ್ದದಿಂದ ಕರ್ನಾಟಕ ಎಂದು ಕರೆದಿರುವುದು ತಿಳಿದುಬರುತ್ತದೆ. ಕರುನಾಟ್ ಎಂದರೆ ಉನ್ನತ ಅಥವಾ ಎತ್ತರದಲ್ಲಿರುವ ನಾಡು ಎಂದರ್ಥ. ಇದು ಹಿಂದೆ ಕಾವೇರಿ ನದಿಯಿಂದ ಗೋದಾವರಿ ನದಿಯವರೆಗೂ ಹಬ್ಬಿತ್ತೆಂದು ನೃಪತುಂಗನ ಆಸ್ಥಾನಿಕ ಕವಿ ಶ್ರೀವಿಜಯನ ಅಲಂಕಾರಗ್ರಂಥ ಕವಿರಾಜಮಾರ್ಗದಲ್ಲಿ ಉಲ್ಲೇಖಿಸಲಾಗಿದೆ. ಸ್ವಾತಂತ್ರ್ಯಾನಂತರ ಭಾರತವನ್ನು ಅನೇಕ ರಾಜ್ಯಗಳನ್ನಾಗಿ ವಿಂಗಡಿಸಲಾಯಿತು. ಮೈಸೂರು ಅರಸರ ಒಡೆತನದಲ್ಲಿದ್ದ ದಕ್ಷಿಣದ 9 ಜಿಲ್ಲೆಗಳನ್ನೊಳಗೊಂಡು 1953 ರಲ್ಲಿ 'ಮೈಸೂರು ರಾಜ್ಯ' ವು ಉದಯವಾಯಿತು. ಅನಂತರ ಭಾಷಾವಾರು ಪ್ರಾಂತ್ಯಗಳಾಗಿ ವಿಂಗಡಿಸುವಾಗ ಮುಂಬಯಿ ಹೈದರಾಬಾದ್, ಮದ್ರಾಸ್ ಹಾಗೂ ಕೊಡಗು ಪ್ರಾಂತ್ಯಗಳಲ್ಲಿ ಹಂಚಿಹೋಗಿದ್ದ ಕನ್ನಡ ಭಾಷೆ ಮಾತನಾಡುವ ಜನರ ಪ್ರದೇಶಗಳನ್ನು ಒಟ್ಟಾಗಿ ಸೇರಿಸಿದ್ದರಿಂದ 1956 ರ ನವೆಂಬರ್ ಒಂದರಂದು 'ವಿಶಾಲ

ಮೈಸೂರು ರಾಜ್ಯ' ಅಸ್ತಿತ್ವಕ್ಕೆ ಬಂದಿತು. ಇದರ ಸವಿನೆನಪಿಗಾಗಿ ಪ್ರತಿವರ್ಷ ನವೆಂಬರ್ ತಿಂಗಳಿನಲ್ಲಿ ರಾಜ್ಯೋತ್ಸವವನ್ನು ಆಚರಿಸಲಾಗುತ್ತಿದೆ. ಕನ್ನಡಿಗರ ಅಭಿಲಾಷೆಯಂತೆ 1973 ನವೆಂಬರ್ ಒಂದರಂದು ನಮ್ಮ ರಾಜ್ಯಕ್ಕೆ 'ಕರ್ನಾಟಕ' ಎಂದು ಮರುನಾಮಕರಣ ಮಾಡಲಾಯಿತು.




## ಭೌಗೋಳಿಕ ಸ್ಥಾನ

ಭಾರತದ 29 ರಾಜ್ಯಗಳಲ್ಲಿ ಕರ್ನಾಟಕವೂ ಒಂದಾಗಿದೆ. ಇದು ಭಾರತದ ದಕ್ಷಿಣದಲ್ಲಿದ್ದು, ಪರ್ಯಾಯ ದ್ವೀಪದ ಪಶ್ಚಿಮ ಮಧ್ಯಭಾಗದಲ್ಲಿದೆ. ಇದು 11 ಡಿಗ್ರಿ- 31` ಮತ್ತು 18 ಡಿಗ್ರಿ- 45` ಉತ್ತರ ಅಕ್ಷಾಂಶಗಳು ಹಾಗೂ 74 ಡಿಗ್ರಿ-12` ಮತ್ತು 78 ಡಿಗ್ರಿ- 40`, ಪೂರ್ವ ರೇಖಾಂಶಗಳ ನಡುವೆ ವಿಸ್ತರಿಸಿದೆ. ಅತ್ಯಂತ ಉತ್ತರದ ತುದಿಯಾದ ಬೀದರ್ ಜಿಲ್ಲೆಯ ಔರಾದ್ ತಾಲ್ಲೂಕಿನಿಂದ ದಕ್ಷಿಣದ ತುದಿಯಾದ ಚಾಮರಾಜನಗರ ಜಿಲ್ಲೆಯವರೆಗೆ ಒಟ್ಟು 750 ಕಿಲೋ ಮೀಟರ್ ಉದ್ದವಿದೆ. ಪಶ್ಚಿಮದಿಂದ ಪೂರ್ವಕ್ಕೆ 400 ಕಿಲೋ ಮೀಟರ್ ಗಳಷ್ಟು ಅಗಲವಾಗಿದೆ. ಉತ್ತರ ಕನ್ನಡ ಜಿಲ್ಲೆಯ ಕಾರವಾರವು ಅತ್ಯಂತ ಪಶ್ಚಿಮದಲ್ಲಿದ್ದು,

